# ಸಿ. ಪಿ. ನಾಗೌಡ

ಡಾ. ಲಕ್ಷ್ಮೀದೇವಿ ಗವಾಯಿ



ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು

C.P. Nagowda : A monograph by **Dr. Lakshmidevi Gawai**
Published by : Registrar : **V. N. Mallikarjuna Swamy,**
Karnataka Lalithakala Academy, Kannada
Bhavana, J.C. Road, Bangalore - 560002



ಪುಟಗಳ ಸಂಖ್ಯೆ : 52

ಬೆಲೆ : 70/-

ಪ್ರಧಾನ ಸಂಪಾದಕ : ವಿ. ಟಿ. ಕಾಳೆ

ಪ್ರಕಾಶಕರು :
ವಿ. ಎನ್. ಮಲ್ಲಿಕಾರ್ಜುನ ಸ್ವಾಮಿ
ರಿಜಿಸ್ಟ್ರಾರ್, ಕರ್ನಾಟಕ ಲಲಿತಕಲಾ ಅಕಾಡೆಮಿ
ಕನ್ನಡ ಭವನ, ಜೆ. ಸಿ. ರಸ್ತೆ, ಬೆಂಗಳೂರು - 560 002.
ದೂರವಾಣಿ : 080-22480297

ಮುಖಪುಟ ವಿನ್ಯಾಸ : ಆರ್. ಅನಿಲ್

ಆಂಗ್ಲ ಅನುವಾದ : ಪ್ರಕಾಶ ಸರ್‌ಮಕದಮ್

ಮುದ್ರಣ
ರಶ್ಮಿ ಪ್ರಿಂಟ್ ಸರ್ವೀಸ್
ನಂ. 8, 1ನೇ ಅಡ್ಡರಸ್ತೆ,
ಕಲಾಸಿಪಾಳ್ಯ ಹೊಸ ಬಡಾವಣೆ
ಬೆಂಗಳೂರು - 560 002
ದೂರವಾಣಿ : 9901916581

## ಅಧ್ಯಕ್ಷರ ನುಡಿ

ಕರ್ನಾಟಕ ಲಲಿತಕಲಾ ಅಕಾಡೆಮಿಯು ಕಳೆದ ನಲವತ್ತುಮೂರು ವರುಷಗಳಿಂದ ಲಲಿತ ಕಲೆಗೆ ಸಂಬಂಧಿಸಿದ ಅನೇಕ ಗ್ರಂಥಗಳನ್ನು ಪ್ರಕಟಿಸುತ್ತಾ ಬಂದಿದೆ. ಈ ಎಲ್ಲ ಗ್ರಂಥಗಳೂ ಕರ್ನಾಟಕದ ಕಲಾಸಕ್ತರ ಹಾಗೂ ಕಲಾವಿದರ ಮೆಚ್ಚುಗೆ ಗಳಿಸಿರುತ್ತವೆ. ಈ ಕಲಾ ಸಾಹಿತ್ಯ ಪ್ರಕಟಣೆಯ ಜೊತೆಗೆ ಕರ್ನಾಟಕದ ಚಿತ್ರ ಕಲಾಕ್ಷೇತ್ರಕ್ಕೆ ಅಪಾರ ಸೇವೆ ಸಲ್ಲಿಸಿದ ಅನೇಕ ಹಿರಿಯ ಕಲಾವಿದರ ಸಾಧನೆಗಳೊಂದಿಗೆ ಅವರ ಸಮಗ್ರ ಪರಿಚಯವನ್ನು ನೀಡುವ ಕಲಾವಿದರ ಮಾಲೆ ಪುಸ್ತಕಗಳನ್ನೂ ಅಕಾಡೆಮಿಯು ಪ್ರಕಟಿಸುತ್ತ ಬಂದಿದೆ. ಈ ಕಲಾವಿದರ ಮಾಲೆಯು ಆಯಾ ಕಲಾವಿದರ ಕಾಲಘಟ್ಟದಲ್ಲಿ ಬೆಳೆದು ಬಂದ ಕರ್ನಾಟಕದ ಕಲಾ ಇತಿಹಾಸವನ್ನೂ ಪರಿಚಯಿಸುತ್ತದೆ. ಕಲಾವಿದರ ಪರಿಚಯದ ಪುಸ್ತಕವನ್ನು ಕನ್ನಡ ಭಾಷೆಯಲ್ಲಿ ಅಲ್ಲದೇ ಇಂಗ್ಲೀಷ್ ಭಾಷೆಗೂ ಅನುವಾದಿಸಿ ಪ್ರಕಟಿಸಲಾಗುತ್ತದೆ. ಈ ಮೂಲಕ ನಮ್ಮ ಕಲಾವಿದರನ್ನೂ ಅವರ ಸಾಧನೆಯನ್ನೂ ಹೊರ ರಾಜ್ಯದ ಓದುಗರಿಗೆ ಪರಿಚಯಿಸಲಾಗುತ್ತದೆ.

ಈ ಹಿನ್ನೆಲೆಯಲ್ಲಿ ಪ್ರಸ್ತುತ ಪ್ರಕಟಿತ **ಸಿ. ಪಿ. ನಾಗೌಡ** ಪುಸ್ತಕವು ಅವರ ಜೀವನ ಮತ್ತು ಸಾಧನೆಗಳನ್ನು ಪರಿಚಯಿಸುತ್ತದೆ. ಈ ಪುಸ್ತಕದ ಲೇಖಕರೂ ಸ್ವತಃ ಕಲಾವಿದರಾಗಿದ್ದು, ಪ್ರಸ್ತುತ ಕಲಾವಿದನ ಜೀವನ, ಸಾಧನೆಗಳನ್ನು ಅರಿತವರಾಗಿದ್ದರಿಂದ ಈ ಕಲಾವಿದರ ಸಮಗ್ರ ಪರಿಚಯವು ಈ ಪುಸ್ತಕವು ಓದುಗರ ಗಮನಕ್ಕೆ ತರುತ್ತದೆ ಎಂದು ಭಾವಿಸಲಾಗಿದೆ.

ಈ ಮೊದಲು ಕಿರು ಅಳತೆಯಲ್ಲಿ ಪ್ರಕಟವಾಗುತ್ತಿದ್ದ ಕಲಾವಿದರ ಪರಿಚಯದ ಪುಸ್ತಕಗಳನ್ನು ಈಗ ದೊಡ್ಡ ಅಳತೆಯಲ್ಲಿ ಸಿದ್ಧಪಡಿಸಿ ಓದುಗರ ಕೈಗಿತ್ತಿದ್ದೇವೆ.

ಎಂದಿನಂತೆ ಕಲಾಸಕ್ತರು, ಕಲಾವಿದರು, ಕಲಾ ಇತಿಹಾಸ ಪ್ರೇಮಿಗಳು ಈ ಪುಸ್ತಕಗಳನ್ನು ಸ್ವಾಗಿತಿಸುತ್ತಾರೆಂದು ಆಶಿಸಲಾಗಿದೆ.

ಈ ಪುಸ್ತಕವನ್ನು ಮುದ್ರಿಸಿದ ರಶ್ಮಿ ಪ್ರಿಂಟ್ ಸರ್ವಿಸ್ ಅವರಿಗೂ ಪ್ರಕಟಿಸಿದ ಕರ್ನಾಟಕದ ಲಲಿತಕಲಾ ಅಕಾಡೆಮಿಯ ರಿಜಿಸ್ಟ್ರಾರ್ ಶ್ರೀ ವಿ. ಎನ್. ಮಲ್ಲಿಕಾರ್ಜುನಸ್ವಾಮಿ ಅವರಿಗೂ ಅಕಾಡೆಮಿಯು ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

ಬೆಂಗಳೂರು

ಎ. ಟಿ. ಕಾಳೆ

## ಲೇಖಕರ ನುಡಿ

ನಾನು ಈಗಾಗಲೇ ನೈಜ ಕಲೆಯ ರಸಋುಷಿ ಎನಿಸಿದ ಕರ್ನಾಟಕದ ಹಿರಿಯ ಕಲಾವಿದರಾದ ಶ್ರೀ ಎಂ. ವಿ. ಚೆಟ್ಟಿಯವರ ಕುರಿತು ಪಿಎಚ್.ಡಿ. ಅಧ್ಯಯನವನ್ನು ಮಾಡಿದ್ದೇನೆ.

ಅದೇ ಹಾದಿಯಲ್ಲಿ ನಡೆದು ಬಂದ ಇನ್ನೋರ್ವ ಹಿರಿಯ ಕಲಾವಿದರಾದ ಶ್ರೀ ಸಿ. ಪಿ. ನಾಗೌಡ ಅವರ ಬಗ್ಗೆ ಈ ಪುಸ್ತಕವನ್ನು ಬರೆಯಲು ಸಂತೋಷವೆನಿಸುತ್ತದೆ.

91 ವರ್ಷ ವಯಸ್ಸಿನ ಶ್ರೀ ನಾಗೌಡ ಅವರನ್ನು ಸಂದರ್ಶಿಸಿ, ಅವರ ಕಲಾ ಅನುಭವದ ಏಳು ಬೀಳುಗಳ ಪರಿಚಯವನ್ನು ನಾನಿಲ್ಲಿ ಮಾಡಿಕೊಟ್ಟಿದ್ದೇನೆ. ಬಾಲ್ಯದಿಂದಲೇ ಕಲೆಯಲ್ಲಿ ಆಸಕ್ತಿಯನ್ನು ಹೊಂದಿದ ಇವರು ಕೊಲ್ಹಾಪುರದ ಶ್ರೀ ವಡಣಗೇಕರ ಅವರ ಕಲಾಶಾಲೆ ಹಾಗೂ ಮುಂಬಯಿಯ ನೂತನ ಕಲಾ ಮಂದಿರದಿಂದ ಚಿತ್ರಕಲಾ ಶಿಕ್ಷಣ ಹಾಗೂ ಮಾರ್ಗದರ್ಶನ ಪಡೆದು ಒಬ್ಬ ಉತ್ತಮ ಕಲಾವಿದರಾಗಿ ಬೆಳೆದರು. ನೈಜ ಕಲಾಶೈಲಿಯನ್ನು ಉಳಿಸಿ, ಬೆಳೆಸಿಕೊಂಡು ಬಂದರು. ಇವರು ಇನ್ನೂ ತುಂಬು ಜೀವನವನ್ನು ನಡೆಸಲಿ ಎಂದು ಹಾರೈಸುವೆ.

ಈ ಪುಸ್ತಕವನ್ನು ಬರೆಯುವಾಗ ಸಹಕರಿಸಿದ ನನ್ನ ಬಾಳಸಂಗಾತಿ ಶ್ರೀ ವಿರೂಪಾಕ್ಷ, ಈ ಪುಸ್ತಕ ಬರೆಸಲು ಕಾರಣರಾದ ಅಕಾಡೆಮಿಯ ಅಧ್ಯಕ್ಷರಾದ ಪಿ. ಟಿ. ಕಾಳೆ, ರಿಜಿಸ್ಟ್ರಾರ್ ಶ್ರೀ ವಿ. ಎನ್. ಮಲ್ಲಿಕಾರ್ಜುನಸ್ವಾಮಿ ಮತ್ತು ಈ ಪುಸ್ತಕವನ್ನು ಅರ್ಥಪೂರ್ಣವಾಗಿ ಇಂಗ್ಲೀಷ್ ಭಾಷೆಗೆ ಅನುವಾದಿಸಿದ ಶ್ರೀ ಪ್ರಕಾಶ ಸರ್‌ಮಕದಮ್ ಹಾಗೂ ಎಲ್ಲ ಸದಸ್ಯರಿಗೂ ನಾನು ಕೃತಜ್ಞಳಾಗಿದ್ದೇನೆ.

*ಡಾ. ಲಕ್ಷ್ಮೀದೇವಿ ಗವಾಯಿ*

# ಸಿ. ಪಿ. ನಾಗೌಡ

ಬೆಳಗಾವಿ ಕರ್ನಾಟಕ ಮುಂಬಯಿಯ ಗಡಿಭಾಗದ ಜಿಲ್ಲೆಯಾಗಿ ಇಂದಿಗೂ ಗಡಿ ಸಮಸ್ಯೆಯ ಕೇಂದ್ರವಾಗಿ ಮುಂದುವರೆದಿದ್ದರೂ ಕೂಡಾ ಇದಾವುದರ ಪರಿವೆ ಇಲ್ಲದೇ ತನ್ನ ಸಾಂಸ್ಕೃತಿಕ ನೆಲೆಯಲ್ಲಿ ಹಲವು ಪ್ರತಿಭಾವಂತರನ್ನು ಹುಟ್ಟು ಹಾಕಿ, ನಾಟಕರಂಗ, ಸಂಗೀತ ಹಾಗೂ ಚಿತ್ರಕಲಾ ಕ್ಷೇತ್ರದಲ್ಲಿ ತಮ್ಮದೇ ಆದ ಛಾಪನ್ನು ಮೂಡಿಸಿದವರು ಹಲವರು ಇಲ್ಲಿದ್ದಾರೆ, ಅವರಲ್ಲಿ ಕೆಲವರು ಪ್ರಸಿದ್ಧಿಗೆ ಬರದೇ ಎಲೆಮರೆಯ ಕಾಯಿಯಂತೆ ಸದ್ದಿಲ್ಲದೆ ತಮ್ಮ ಕಲಾ ಚಟುವಟಿಕೆಗಳಲ್ಲಿ ತೊಡಗಿರುವುದು ಗಮನಾರ್ಹ ಮತ್ತು ಪ್ರಶಂಸನೀಯ. ಅಂತಹವರಲ್ಲಿ ಕಲಾವಿದ ಶ್ರೀ ಸಿ. ಪಿ. ನಾಗೌಡ ಒಬ್ಬರು ಅತ್ಯಂತ ಸರಳ ಮತ್ತು ಸೌಜನ್ಯಕ್ಕೆ ಹೆಸರಾದವರು, ಸೌಮ್ಯಸ್ವಭಾವದ ಇವರಲ್ಲಿ ಆಗಾಧವಾದ ಕಲಾ ಪ್ರತಿಭೆ ಅಡಗಿದೆ. ಸಜ್ಜನಿಕೆಯ ನಡತೆ ಹೊಂದಿದ ಇವರು ಎಂದೂ ಕೀರ್ತಿ ಮತ್ತು ಸ್ಥಾನಮಾನಗಳನ್ನು ಆರಿಸಿಹೋದವರಲ್ಲ ಚಿತ್ರಕಲಾ ಕ್ಷೇತ್ರದಲ್ಲಿ ತಮ್ಮದೇ ಆದ ಮಾರ್ಗವನ್ನು ಕಂಡುಕೊಂಡವರು.

ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲ್ಲೂಕಿನ ಅಮ್ಮಣಗಿ ಗ್ರಾಮದ ಸಾಮಾನ್ಯ ಬಡ ರೈತ ಕುಟುಂಬಕ್ಕೆ ಸೇರಿದವರು. ಇವರ ಪೂರ್ತಿ ಹೆಸರು ಚನ್ನಮಲ್ಲಪ್ಪಾ ಪರಗೌಡ ನಾಗೌಡ ತಂದೆ ಸತ್ಯವಾದಿ ಶ್ರೀ ಪರಗೌಡ ತಾಯಿ ಶ್ರೀಮತಿ ಕಾಶಿಬಾಯಿ ಇವರ ಉದರದಲ್ಲಿ 1914ರಲ್ಲಿ ಜನಿಸಿದರು. ಶರಣತ್ವದಲ್ಲಿ ನಿಷ್ಠೆ ಹೊಂದಿದ ಇವರು ಆಧ್ಯಾತ್ಮದ ಬದುಕನ್ನು ಸವೆಸಿದವರು. ಈಗ ಅವರಿಗೆ 91 ವರ್ಷ ವಯಸ್ಸು, ಬಾಲ್ಯವನ್ನು ಅಮ್ಮಣಗಿಯಲ್ಲಿಯೇ ಕಳೆದು ಪ್ರಾಥಮಿಕ 5ನೇ ಇಯತ್ತೇ ನಂತರ ನಿಡಸೊಸಿಯಲ್ಲಿ ವಿದ್ಯಾಭ್ಯಾಸ ಮುಂದುವರೆಸಿದರು. ನಂತರ ಮಾಧ್ಯಮಿಕ ಶಿಕ್ಷಣವನ್ನು ಚಿಕ್ಕೋಡಿಯಲ್ಲಿ ಮುಗಿಸಿದರು.

## ಕಲಾ ಪ್ರೇರಣೆ

ಅವರಲ್ಲಿರುವ ಕಲೆ ಅರಳಲು ಆ ಚೇತನಕ್ಕೆ ತಕ್ಕ ನೆಲ ಅಮ್ಮಣಗಿಯ ಹಳ್ಳಿಯ ವಾತಾವರಣ ಮನೆಯ ಪವಿತ್ರ ಪರಂಪರೆ ಅವರ ಕಲಾ ಪ್ರತಿಭೆ ಫಲವತ್ತಾಗಿ ಬೆಳೆಯಲು ಒಬ್ಬ ಕಲಾವಿದನಾಗಿ ರೂಪಗೊಳ್ಳಲು ಸ್ಫೂರ್ತಿದಾಯಕವಾದವು. ಚಿಕ್ಕವರಿರುವಾಗ ಅವರ ಸಹೋದರ ಸಂಬಂಧಿಗಳು ಗಣಪತಿಯ ವಿಗ್ರಹಗಳನ್ನು ತಯಾರಿಸುತ್ತಿದ್ದರು. ಆಸಕ್ತಿ ಹೊಂದಿದ ಇವರು ಸಹ ಅವರಲ್ಲಿ ಒಂದಾಗಿ ಮೂರ್ತಿಗಳ ರಚನೆಯನ್ನು ಮಾಡುತ್ತಿದ್ದರು. ಅಂತೆಯೇ ಆಗ ಅವರ ದೇವರ ಮನೆಯ ಜಗಲಿಯ ಮೇಲೆಲ್ಲ ಇವರೇ ನಿರ್ಮಿಸಿದ ಮೂರ್ತಿಗಳ ಸ್ಥಾಪನೆ ಆಗಿತ್ತು.

ಕಲೆ ಅವರ ಹುಟ್ಟಿನೊಂದಿಗೆ ದೈವದತ್ತವಾಗಿ ಬಂದ ಕೊಡುಗೆಯಾಗಿದೆ. ಅಮ್ಮಣಗಿ ಶಾಲೆಯಲ್ಲಿ ಕಲಿಯುವಾಗ ವರ್ಗದ ವಿದ್ಯಾರ್ಥಿಗಳಿಗೆ ಒಂದು ಪೆನ್ಸಿಲ್ ಬದಲಿಗೆ ಒಂದು ಚಿತ್ರ

ರಚಿಸಿಕೊಡುತ್ತಿದ್ದರಂತೆ. ಇವರ ಚಿತ್ರಗಳಿಂದ ಪ್ರಭಾವಿತರಾದ ನೆರೆಯ ಹಳ್ಳಿಯ ಜನರು ಹಬ್ಬ ಹುಣ್ಣಿಮೆಗಳಲ್ಲಿ ರಚಿಸುವ ಜನಪದ ಅಲಂಕಾರಿಕ ಚಿತ್ರಗಳನ್ನು ಇವರಿಂದಲೇ ಚಿತ್ರಿಸಿಕೊಳ್ಳುತ್ತಿದ್ದರಂತೆ, ಹೀಗೆ ಬಾಲ್ಯದಲ್ಲಿಯೇ ಗೋಡೆ, ನೆಲ, ಪಾಟಿಗಳ ಮೇಲೆಲ್ಲ ಚಿತ್ತಾಕರ್ಷಕ ಚಿತ್ರಗಳ ರಚನೆಯ ಜೊತೆ ಅವರ ಕಲೆ ಅರಳಿತು. ಶಾಲಾ ಓದಿನಲ್ಲೇ ತಮಗೆ ಅನಿಸಿದ್ದನ್ನು ಚಿತ್ರಿಸುವುದು ಮತ್ತು ಅದನ್ನು ಶಿಕ್ಷಕರಿಗೆ ತೋರಿಸಿ ಸೈ ಅನ್ನಿಸಿಕೊಳ್ಳುವುದು.

ಅನೇಕ ಸಾರಿ ಶಾಲೆಗೆ ರಜೆ ಇದ್ದಾಗ ಗುಬ್ಬಿ ಕಾಯುವ ಸಲುವಾಗಿ ಹೊಲಕ್ಕೆ ಹೋಗುವುದು. ಅಲ್ಲಿ ಕ್ರೂರ ಪ್ರಾಣಿಗಳ ಮನುಷ್ಯರ ಚಿತ್ರ ಬರೆದು ನೇತು ಹಾಕಿ ಇತರ ಪಕ್ಷಿಗಳು ಬರದಂತೆ ತಡೆ ಒಡ್ಡುವುದು ಇದರಿಂದ ಪಕ್ಷಿಗಳು ಸಹ ಆ ಕಡೆ ಬರುತ್ತಿರಲಿಲ್ಲವಂತೆ. ಇವರ ನೈಜ ತದ್ರೂಪ ಚಿತ್ರಶೈಲಿಗೆ ಇದಕ್ಕಿಂತ ಬೇರೆ ಸಾಕ್ಷಿ ಬೇಡ ಎನಿಸುತ್ತದೆ. ಈ ರೀತಿಯ ಚಿತ್ರ ಬರೆಸಲು ಇತರ ಹಳ್ಳಿಗರಿಂದ ಬಾಲಕ ನಾಗೌಡ ಅವರಿಗೆ ಎಲ್ಲಿಲ್ಲದ ಬೇಡಿಕೆ.

## ಕಲಾ ವ್ಯಾಸಂಗ

ನಾಗೌಡ ಅವರಲ್ಲಿ ಹೀಗೆ ಕಲೆ ತಾನಾಗಿಯೇ ಗರಿಗೆದರಿಕೊಂಡು 5ನೇ ತರಗತಿಯಲ್ಲಿ ಓದುವಾಗಲೇ ಅಮ್ಮಣಗಿಗೆ ಬಂದ ಸರ್ಕಸ್ ಕಂಪನಿಯೊಂದರಲ್ಲಿ ಚಿತ್ರ ಬಿಡಿಸುವ ಕೆಲಸ ಮಾಡುತ್ತಿದ್ದರು. ಚಿಕ್ಕೋಡಿಯಲ್ಲಿ ಮಾಧ್ಯಮಿಕ ಶಿಕ್ಷಣವನ್ನು ಕಲಿಯುವ ಸಂದರ್ಭದಲ್ಲಿ ಇವರಲ್ಲಿ ಇದ್ದ ಈ ಗೀಳನ್ನು ಚಿತ್ರಕಲಾ ಶಿಕ್ಷಕರಾದ ಖಾಸ್‌ಗಿಸ್ ಅವರು ಗಮನಿಸಿ ಪ್ರೋತ್ಸಾಹಿಸಿದರು ಆಗಲೇ ಡ್ರಾಯಿಂಗ್ ಗ್ರೇಡ್ ಪರೀಕ್ಷೆಗಳನ್ನು ಕಟ್ಟಿ ಉತ್ತೀರ್ಣರಾದರು.

ಇವರಲ್ಲಿರುವ ಕಲಾಸಕ್ತಿ ಹಾಗೂ ನೈಪುಣ್ಯತೆಯನ್ನು ಗುರುತಿಸಿದ ಅವರ ಮನೆಯ ಎದುರಿಗೆ ಇರುವ ವಿನಾಯಕರಾವ್ ಕುಲಕರ್ಣಿಯವರು ಬಾಲಕನ ಪ್ರತಿಭೆ ಕಮರಿಹೋಗದಿರಲೆಂದು ನಾಗೌಡ ಅವರನ್ನು ಚಿತ್ರಕಲೆಯ ಹೆಚ್ಚಿನ ವ್ಯಾಸಂಗಕ್ಕಾಗಿ ಮಹಾರಾಷ್ಟ್ರದ ಕೊಲ್ಹಾಪುರಕ್ಕೆ ಕರೆದುಕೊಂಡು ಹೋದರು ಇದಕ್ಕೆ ಮನೆಯವರ ಬೆಂಬಲವು ಸಿಕ್ಕಿತು.

1934ರಲ್ಲಿ ಕೊಲ್ಹಾಪುರದ ರಾಷ್ಟ್ರಪತಿ-ಪ್ರಶಸ್ತಿ ವಿಜೇತರಾದ ಶ್ರೀ ಗಣಪತರಾವ ವಡಣಗೇಕರ ಅವರ ಚಿತ್ರಕಲಾ ಶಾಲೆಯಲ್ಲಿ ಶಾಸ್ತ್ರೋಕ್ತವಾದ ಕಲಾ ಶಿಕ್ಷಣದ ಪರಿಪೂರ್ಣ ಒಳ್ಳೆಯ ತರಬೇತಿ ದೊರೆಯಿತು. ಕಲಾವಿದನಾಗಬೇಕೆಂಬ ಮಹತ್ವಾಕಾಂಕ್ಷೆಗೆ ಅಲ್ಲಿಯ ಕಲಾ ವಾತಾವರಣ ಇನ್ನಷ್ಟು ಸ್ಫೂರ್ತಿ ನೀಡಿತು. ಕಲಾ ಗುರುಗಳಾದ ಶ್ರೀ ವಡಣಗೇಕರ ಅವರ ಮಾರ್ಗದರ್ಶನದಲ್ಲಿ ನಿಸರ್ಗಚಿತ್ರ, ಸ್ಥಿರರೂಪ ಚಿತ್ರ ಹಾಗೂ ಸಂಯೋಜನಾ ಚಿತ್ರಣಗಳು ಮುಂಬೈನ ಜೆ. ಜೆ. ಕಲಾ ಶಾಲೆಯ (ಅಕಾಡೆಮಿಕ್ ಶೈಲಿ)ಯಂತಹ ಚಿತ್ರಕಲೆಯ ಮೂಲಸೂತ್ರಗಳನ್ನು ಕಲಿತರು. ನೈಜ ಕಲಾ ಶೈಲಿಯನ್ನೇ ಅಳವಡಿಸಿಕೊಂಡು ತಮ್ಮ ಸಮಕಾಲೀನ ಕಲೆಯನ್ನು ಬದುಕಿಸಿಕೊಂಡು, ಮುಂದುವರೆಸಿಕೊಂಡು ಬಂದವರಲ್ಲಿ ಇವರೂ ಒಬ್ಬರು ಅತ್ಯಂತ ಪರಿಶ್ರಮದಿಂದ ಪಠ್ಯಕ್ಕೆ ಸಂಬಂಧಿಸಿದ ಅಭ್ಯಾಸ, ಜೊತೆಗೆ ವಿರಾಮದ ವೇಳೆಯಲ್ಲಿ ಸಂತೆ, ಬಸ್‌ಸ್ಟ್ಯಾಂಡ್ ನಂತಹ ಸ್ಥಳದಲ್ಲಿ ಮನುಷ್ಯಾಕೃತಿಗಳ ಕರಡು ಚಿತ್ರ ರಚನೆ ಮಾಡುತ್ತಿದ್ದರು.

ಗುಡ್ಡದ ನಿಸರ್ಗದ ಮಡಿಲಲ್ಲಿ ನಿಸರ್ಗ ಚಿತ್ರಗಳ ರಚನೆಯ ಜೊತೆಗೆ ರ್‍ಯಾಪಿಡ್ (ತೀವ್ರಗತಿಯ) ಸ್ಕೆಚ್ ಗಳನ್ನು ಮಾಡುತ್ತಿದ್ದರಂತೆ ದಿನಾಲೂ ಐವತ್ತು-ನೂರೂ ಚಿತ್ರ ಕರಡುಗಳನ್ನು ಚಿತ್ರಿಸುತ್ತಿದ್ದವೆಂದು ಅವರೇ ಹೇಳುತ್ತಾರೆ. ಕೆಲವು ಸಾರಿ ನಿಸರ್ಗ ಚಿತ್ರಗಳನ್ನು ಚಿತ್ರಿಸಲು ಆ ಪ್ರದೇಶದ ಸೃಷ್ಟಿಸೌಂದರ್ಯದ ಖಣಿಯೇ ಆದ ಪಂಚಗಂಗಾ ನದಿಯ ಹತ್ತಿರ ಹೋಗಿ ಅನೇಕ ಚಿತ್ರಗಳನ್ನು ಚಿತ್ರಿಸುತ್ತಿದ್ದರು. ಅಲ್ಲಿಯ ನಿಸರ್ಗ ಪರಿಸರ ಬಟ್ಟೆ ಒಗೆಯುವವರು ದೋಣಿಯಲ್ಲಿ ಹೋಗುವ ಬರುವ ಮೀನು ಹಿಡಿಯುವ ಹೀಗೆ ನಿಸರ್ಗದ ಮೂಲಕವೇ ಬಣ್ಣಗಳ ಅಧ್ಯಯನವನ್ನು ಮಾಡಿ ನೆರಳು ಬೆಳಕಿನ ಆಟವನ್ನು ಅದರಲ್ಲಿ ಬದಲಾಗುವ ಬಣ್ಣಗಳ ಛಾಯೆಯನ್ನು ತಮ್ಮ ಚಿತ್ರಗಳಲ್ಲಿ ಸೆರೆ ಹಿಡಿಯುತ್ತಿದ್ದರು. ಒಮ್ಮೆ ಮೀನು ಹಿಡಿಯುವವರನ್ನು ಕುರಿತು ಅರ್ಧಗಂಟೆಯಲ್ಲೆ ನಿಸರ್ಗ ಚಿತ್ರವನ್ನು ರಚಿಸಿದ್ದರು. ಅದನ್ನು ನೋಡಿದ ಅವರ ಶಿಕ್ಷಕರು ಬಹಳ ಮೆಚ್ಚುಗೆಯನ್ನು ವ್ಯಕ್ತಪಡಿಸಿ ಅದನ್ನು ಚಿತ್ರಕಲಾ ಪ್ರದರ್ಶನದಲ್ಲಿ ಪ್ರದರ್ಶಿಸಿದರು. ಆದರೇ ದುರದೃಷ್ಟವಶಾತ್ ಯಾರೋ ಆ ಚಿತ್ರವನ್ನು ಕಳುವು ಮಾಡಿಕೊಂಡು ಹೋದರೆಂದು ವಿಷಾಧವನ್ನು ವ್ಯಕ್ತಪಡಿಸುತ್ತಾರೆ.

ನಿಸರ್ಗದ ಪ್ರತಿಯೊಂದು ಅಂಶವನ್ನು ಗಿಡ, ಮರ, ಬಳ್ಳಿ, ನೀರು ಪ್ರಾಣಿಗಳನ್ನು ಹೂಬೆ ಹೂಬ(ಮರಾಠಿ ಶಬ್ದ) (ಇದ್ದಕ್ಕಿದ್ದ ಹಾಗೆ) ಚಿತ್ರಿಸುತ್ತಿದ್ದ ಎಂದು ತಮ್ಮ ನೈಜ ಕಲಾ ಶೈಲಿಯ ಬಗ್ಗ ಜ್ಞಾಪಿಸಿಕೊಳ್ಳುತ್ತಾರೆ. ಕೊಲ್ಹಾಪುರದ ಈ ಕಲಾ ಶಿಕ್ಷಣದ ಸಂದರ್ಭದಲ್ಲಿ ಅವರಿಗೆ ಅನೇಕ ಕಲಾವಿದರ ಸ್ನೇಹ ಸಂಪರ್ಕ ದೊರೆಯಿತು. ಕಲಾ ಮಹರ್ಷಿಗಳಾದ ಅಬಾಲಾಲ ಹಮಾನ, ಬಾಬುರಾವ ಪೆಂಟರ, ಮಾಧವರಾವ್ ಬಾಗಲ್ ಅಚರೇಕರ, ಪರಂಡೇಕರ, ಎಸ್.ಎಸ್. ಕುಲಕರ್ಣಿ ಮುಂತಾದವರ ಕಲಾಕೃತಿಗಳನ್ನು ನೋಡುವ ಪರಸ್ಪರ ವಿಚಾರ ವಿನಿಮಯ ಮಾಡಿಕೊಳ್ಳುವ ಅವಕಾಶ ದೊರೆಯಿತು. ಕಲಾಕೃತಿಗಳೆಂದರೆ ಹೇಗಿರಬೇಕು ಎಂಬುದು ತಿಳಿಯಿತು ಹಾಗೆ ಸ್ವತಂತ್ರವಾಗಿ ಕಲಾಪ್ರದರ್ಶನ ಮಾಡುವ ಜಾತಿಬಂತ್ರಿ ಇದರಿಂದ ಬಂಗಾರ ಹಾಗೂ ಬೆಳ್ಳಿ ಪದಕ ಬಹುಮಾನ ಪಡದೆ ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಹೀಗೆ ಬಲ್ಲದವರಿಂದ ಕಲಿತು ಮುನ್ನಡೆಯುವ ಸ್ವಭಾವ.

ಕಲಾ ಗುರುಗಳಾದ ವಡಣಗೇಕರ ಅವರ ಪ್ರೇರಣೆಯಿಂದ ಚಿತ್ರಕಲೆಯ ಹೆಚ್ಚಿನ ಶಿಕ್ಷಣ ಹಾಗೂ ವೃತ್ತಿಗಾಗಿ ಮುಂಬೈಗೆ ಹೋಗಲು ಆದೇಶ ಮಾಡಿದರು. ಕಲಾವಿದ ಡಿ.ಜಿ. ಬಡಿಗೇರ ಅವರು ಸ್ಥಾಪಿಸಿದ, ಮುಂದೆ ಶ್ರೀ ಜಿ. ಎಸ್.ದಂಡಾವತಿಮಠ ಅವರು ನಡೆಸಿಕೊಂಡು ಬಂದ ನೂತನ ಕಲಾಮಂದಿರ ಕಲಾಸಕ್ತರಿಗೆ ಯಾವತ್ತೂ ಆಶ್ರಯ ನೀಡಿರುವ ಶಾಲೆ. ಅದರಲ್ಲೂ ಕನ್ನಡದ ಮಂದಿ ಎಂದರೆ ದಂಡಾವತಿಮಠರಿಗೆ ಎಲ್ಲಿಲ್ಲದ ಸಂತೋಷ ಅಂತೆಯೇ 1938ರಲ್ಲಿ ಇವರಿಗೂ ಅಲ್ಲಿ ಚಿತ್ರ ಕಲಾಭ್ಯಾಸ ಮುಂದುವರಿಸಲು ಅವಕಾಶ ದೊರೆಯಿತು.

ಜೆ. ಜೆ. ಕಲಾಶಾಲೆಗೆ ಸರಿಸಮನಾಗಿ ನಿಲ್ಲುವಂಥ ಭದ್ರ ಬುನಾದಿಯ, ಕಲಾಬೋಧನೆಯು ಅಲ್ಲಿತ್ತು. ವಿದ್ಯಾರ್ಥಿಗಳ ಅಭಿಲಾಷೆಯಂತೆ ಬೇರೆ ಬೇರೆ ಪ್ರಾಂತದ ವೇಷಭೂಷಣಗಳನ್ನು ರೂಪದರ್ಶಿಗಳಿಗೆ ತೊಡಿಸಿ ಭಾವಚಿತ್ರಣಕ್ಕೆ ಅಸ್ಪದ ಮಾಡಿಕೊಡುತ್ತಿದ್ದರು. ಹಾಗೆಯೇ ವಿದ್ಯಾರ್ಥಿಗಳ ಬೇರೆ ಬೇರೆ ಗುಂಪುಗಳನ್ನು ಮಾಡಿ ನಿಸರ್ಗ ಚಿತ್ರಣಕ್ಕೂ ರೇಖಾಚಿತ್ರಣಕ್ಕೂ ಸ್ವತಃ ದಂಡಾವತಿಮಠ ಗುರುಗಳೇ ಕರೆದುಕೊಂಡು ಹೋಗುತ್ತಿದ್ದರು. ಇಂತಹ ಕಲಾಗುರುಗಳ ಮಾರ್ಗದರ್ಶನದಿಂದ

ನಾಗೌಡರು ಕಲಾಕೃತಿಗಳ ರಚನಾ ಸಾಮರ್ಥ್ಯವನ್ನು ಇನ್ನಷ್ಟು ಹೆಚ್ಚಿಸಿಕೊಂಡರು ಮತ್ತು ದಂಡಾವತಿಮಠರು ಸ್ವತಂತ್ರ ಕಲಾ ಜೀವನ ನಡೆಸಲು ದಾರಿ ಮಾಡಿ ಕೊಟ್ಟರೆಂದು ಸ್ಮರಿಸಿ ಕೊಳ್ಳುತ್ತಾರೆ. ಇಂತಹ ಕಲಾಗುರುಗಳನ್ನು ಗಳಿಸಿದ ಶಿಷ್ಯವೃಂದ ಅಪಾರ ಶ್ರೀ ಕೆ. ಕೆ. ಹೆಬ್ಬಾರ, ಶ್ರೀ ಎ. ಎ. ಅಲಮೇಲಕರ, ಶ್ರೀ ಎಸ್.ಎಂ. ಪಂಡಿತ, ಹಳದನಕರ, ಮಾಳಿಗುರ್ಜರ ಮುಂತಾದ ಕಲಾವಿದರ ಸಂಪರ್ಕ ವಿದ್ಯಾರ್ಥಿಯಾಗಿ ಹೋಗಿದ್ದ ನಾಗೌಡ ಅವರಿಗೂ ಲಭಿಸಿ ಇನ್ನಷ್ಟು ಆತ್ಮಸ್ಥೈರ್ಯ ತಂದುಕೊಟ್ಟಿತು.

## ಕಲಾವೃತ್ತಿ

ಶಿಕ್ಷಣದ ಜೊತೆಗೆ 1938ರಲ್ಲಿ ಉದರ ನಿಮಿತ್ತಕ್ಕಾಗಿ ಮುಂಬೈನ ಚಲನಚಿತ್ರದ ಕಲಾವಿಭಾಗವನ್ನು ಸೇರಿದರು ಅಂದಿನ ಹೆಸರಾಂತ ಸಿನೇಮಾ ಕಂಪನಿ ಸಾಗರಮೂಹಿಟೋನದಲ್ಲಿ ಅಸಿಸ್ಟೆಂಟ್ ಆರ್ಟ್ ಡೈರೆಕ್ಟರ್ ಆಗಿ ವೃತ್ತಿ ಪ್ರಾರಂಭಿಸಿದರು. ಚಲನಚಿತ್ರದಲ್ಲಿ ಬರುವ ಯಾವುದೇ ಪ್ರಸಂಗ, ಕಾಡುಕುಣಿತದ ಪರಿಸರ ಇರಲಿ, ಅರಮನೆಯ ವೈಭೋಗ, ದರ್ಬಾರಿನ ಪೀಠೋಪಕರಣ, ರಾಜ ರಾಣಿಯರ ಪೋಷಾಕಿನ ವಸ್ತ್ರ ವಿನ್ಯಾಸಗಳು ಅಂತಪುರ ಹೀಗೆ ನಿರ್ದೇಶಕರ ಬೇಡಿಕೆಗೆ ಅನುಗುಣವಾಗಿ ಕರಡು ಪತ್ರಿ (ಸ್ಕೆಚ್) ಮಾಡಿ ತೋರಿಸುತ್ತಿದ್ದರು, ನಂತರ ದೊಡ್ಡ ದೊಡ್ಡ ಪರದೆಯ ಮೇಲೆ ಚಿತ್ರಿಸುತ್ತಿದ್ದರು. ಸೆಟ್ಟಿಂಗ್ ಸಲುವಾಗಿ ವಿವಿಧ ಪೀಠೋಪಕರಣಗಳ ರೇಖಾ ಚಿತ್ರಗಳನ್ನು ಚಿತ್ರಿಸುತ್ತಿದ್ದರು ಹೀಗೆ ಕಲೆ ಅವರ ಜೀವನ ಸಂಗಾತಿಯಾಯಿತು.

ಒಮ್ಮೆ ಹನುಮಂತ ತನ್ನ ಅತ್ಯಂತ ಉದ್ದದ ಬಾಲವನ್ನು ಸುತ್ತಿ (ಸುಮಾರು 15 ರಿಂದ 20 ಅಡಿ ಎತ್ತರ) ಅದರ ಮೇಲೆ ಕುಳಿತಂಥ ದೃಶ್ಯದ ಸೆಟ್ಟಿಂಗ್ ಬೇಕಾಗಿತ್ತು. ಆಗ ನಿರ್ದೇಶಕರು ಈ ಕೆಲಸವನ್ನು ನಾಗೌಡರಿಗೆ ವಹಿಸಿಕೊಟ್ಟರಂತೆ, ಈಗಿನ ದಿನಮಾನಗಳಂತೆ ಆಗ ಕಂಪ್ಯೂಟರ್ ಸೌಲಭ್ಯ ಇರಲಿಲ್ಲ. ಎಲ್ಲವನ್ನು ಮಾನವ ಶಕ್ತಿಯಿಂದಲೇ ನಿರ್ಮಿಸಿ ಚಿತ್ರಿಸಿಕೊಳ್ಳಬೇಕು. ಅದಕ್ಕಾಗಿ ನಾಗೌಡರು ವಿಚಾರಮಾಡಿ ಕೊನೆಗೆ ಮುಂಬೈನ ಅಂಧೇರಿ ಪ್ರದೇಶದಲ್ಲಿರುವ ಎತ್ತರದ ಪ್ರದೇಶಕ್ಕೆ ಕರೆದುಕೊಂಡು ಹೋಗಿ ದಪ್ಪವಾದ ಹಗ್ಗವನ್ನು ತರಿಸಿ ಅದಕ್ಕೆ ಕೂದಲ ಮೈವಳಿಕೆಯನ್ನು ಕೊಡಲು ಕುರಿ ಉಣ್ಣೆ ಹಚ್ಚಿ ಅದನ್ನು ದೊಡ್ಡದಾಗಿ ಸುತ್ತಿ ಮಧ್ಯದಲ್ಲಿ ಎರಡು ಕಟ್ಟಿಗೆ ಹಲಿಗೆಯನ್ನು ಬಡಿಸಿ ಹನುಮಂತ ಪಾತ್ರಧಾರಿಯನ್ನು ಅದರ ಮೇಲೆ ಕುಳ್ಳರಿಸಿ ಚಿತ್ರಿಸಿಕೊಳ್ಳಲಾಯಿತಂತೆ ನಂತರ ಚಿತ್ರ ನೋಡಿದಾಗ ನಿಜವಾಗಿಯೂ ಹನುಮಂತ ತನ್ನ ಬಾಲದ ಮೇಲೆ ಕುಳಿತ ಹಾಗೆ ತೋರಿತಂತೆ ಇಂತಹ ಕಲಾ ನಿರ್ದೇಶನ ಅವರಲ್ಲಿರುವ ಜಾಣತನ ಮತ್ತು ಕಲಾಕೌಶಲ್ಯಕ್ಕೆ ಕನ್ನಡಿ ಹಿಡಿದ ಹಾಗಿದೆ.

ಅದೇ ರೀತಿ ಕಾಡಿನ ನೃತ್ಯಕ್ಕೆ ನವಿಲುಗರಿಗಳನ್ನೇ ಕಾಡಿನ ಜನರ ವೇಶಭೂಷಣದಂತೆ ಕರಡು ರಚಿಸಿ ನಿರ್ದೇಶಕರ ಪ್ರಶಂಸೆಗೆ ಕಾರಣವಾದರು ಹೀಗೆ ವೈವಿಧ್ಯ ಪೂರ್ಣವಾದ ಚಲನಚಿತ್ರಗಳ ಸನ್ನಿವೇಶಗಳಿಗೆ ತಕ್ಕಂತಹ ಕರಡು ಚಿತ್ರಗಳನ್ನು ಸತತ ಎರಡು ವರ್ಷಗಳ ಕಾಲ ರಚಿಸಿಕೊಟ್ಟರು. ಈ ಮಧ್ಯದಲ್ಲಿ ಬೆಳಗಾಂ ಜಿಲ್ಲೆಯ ಸಂಕೇಶ್ವರ ಗ್ರಾಮದ ಹೆಣ್ಣನ್ನು ನೋಡಿ ಮದುವೆಯನ್ನು ಮಾಡಿದರು, ಆ ಸಮಯದಲ್ಲಿ ಅವರು ತುಂಬಾ ಕೆಲಸಗಳ ಮಧ್ಯ ತಮ್ಮನ್ನು ತೊಡಗಿಸಿಕೊಂಡಿದ್ದರು.

ಅಷ್ಟರಲ್ಲಿ 1941ರಲ್ಲಿ ಹಿಂದು ಮುಸ್ಲಿಮರ ದಂಗೆ ಪ್ರಾರಂಭ ಆಯ್ತು. ಆಗ ಈ ಸುದ್ದಿಯಿಂದ ಕಂಗೆಟ್ಟ ಎರಡು ಮನೆತನಗಳು ಹೆದರಿ ತಮ್ಮ ಕುಡಿಜೀವಗಳು ಬದುಕುಳಿದರೆ ಸಾಕೆಂಬ ನಿರ್ಧಾರದಿಂದ ಅಲ್ಲಿಯ ಅವರ ಕೆಲಸವನ್ನು ಬಿಟ್ಟು ಹೆಂಡತಿಯೊಂದಿಗೆ ಸಂಕೇಶ್ವರಕ್ಕೆ ಮರಳಿ ಬರಲು ಒತ್ತಾಯದ ಕರೆ ಬಂದಿತು. ಬೇರೆ ದಾರಿಯಿಲ್ಲದೇ ಹೆತ್ತವರ ಮನಸ್ಸನ್ನು ನೋಯಿಸದೆ ಕೈಯಲ್ಲಿದ್ದ ದುಡಿಮೆಯನ್ನು ಬಿಟ್ಟು ಕುಟುಂಬ ಸಹಿತ ಸಂಕೇಶ್ವರಕ್ಕೆ ಬಂದರು. ಈಗ ನಿಜವಾದ ಬದುಕಿನ ಹೋರಾಟ ಪ್ರಾರಂಭವಾಯಿತು. ಸ್ವತಂತ್ರ ಕಲಾ ಜೀವನದ ಮೊದಲ ಹೆಜ್ಜೆ ಇಡಲು ಮನಸ್ಸು ಮಾಡಿದರು. ಆಗಿನ್ನೂ ಬಣ್ಣದ ಛಾಯಾಚಿತ್ರ ಪ್ರಚಲಿತದಲ್ಲಿ ಇಲ್ಲದೇ ಇರುವಂತಹ ಕಾಲ ಈಗಾಗಲೇ ಒಳ್ಳೆಯ ಹೆಸರನ್ನು ಗಳಿಸಿದ ಇವರಿಗೆ ಈ ಸಮಯದಲ್ಲಿ ಸುತ್ತಮುತ್ತಲಿನ ಊರುಗಳಿಂದ ಗಣ್ಯರ, ಹಿರಿಯರ ಭಾವಚಿತ್ರ ರಚಿಸಲು ಕರೆ ಬಂದವು. ಮೂರು ನಾಲ್ಕು ವರ್ಷ ಇದೇ ರೀತಿ ಸಾಗಿದ್ದ ಬದುಕಿಗೆ ಆಧಾರದ ಇನ್ನೊಂದು ಮುಖವಾಗಿ ಸ್ವಲ್ಪ ಹೊಲಗದ್ದೆ ಕೂಡ ಇತ್ತು ಮುಂದೆ ಮಕ್ಕಳಾದ ಮೇಲೆ ಸಂಸಾರ ದೊಡ್ಡದಾದಂತೆ ಈ ದುಡಿಮೆ ಸಾಕಾಗಲಿಲ್ಲ. ಕಾರಣ ಇನ್ನೊಂದು ಪರಿಚಿತವಿರುವ ಕಲೆ ಛಾಯಾಗ್ರಹಣವನ್ನೂ ಇಲ್ಲಿ ಬಳಸಿಕೊಂಡರು.

1944ರಲ್ಲಿ ಅವರಿಗಿರುವ ಊರಿನಲ್ಲಿ ವಿದ್ಯುತ್ ಸೌಲಭ್ಯವಿರಲಿಲ್ಲ ಆ ಕಾಲದಲ್ಲಿ ಡೇಲೈಟ್ ಛಾಯಾಗ್ರಹಣ ಸ್ಟುಡಿಯೋ ಪ್ರಾರಂಭ ಮಾಡಿದರು. ಸೂರ್ಯನ ಬೆಳಕು ಇದ್ದಾಗ ಮಾತ್ರ ಛಾಯಾಚಿತ್ರ ತೆಗೆಯುವುದು. ಮುಂಬಯಿಯ ಚಲನಚಿತ್ರ ರಂಗದಲ್ಲಿ ಪರದೆಯ ಹಿಂದೆ ಅನೇಕ ರೀತಿಯ ಕೆಲಸ ಮಾಡಿ ಸಾಕಷ್ಟು ಅನುಭವ ತರಬೇತಿ ಹೊಂದಿದ ಅವರಿಗೆ ಸುಲಭ ರೀತಿಯಲ್ಲಿ ಕಲಾಪೂರ್ಣ ಛಾಯಾಚಿತ್ರ ತೆಗೆಯುವುದು ನೀರು ಕುಡಿದಷ್ಟೇ ಸುಲಭದ ಕೆಲಸವಾಗಿತ್ತು. ಇಂತಹ ಛಾಯಾಚಿತ್ರಗಳಿಗಾಗಿ ಜನರ ಬೇಡಿಕೆಯೂ ಇತ್ತು. ಈ ಮಧ್ಯ ಅವರ ಚಿತ್ರರಚಿಸುವ ಕಾರ್ಯ ಸ್ಥಗಿತಗೊಂಡಿತು.

ನಂತರ ಊರಿಗೆ ವಿದ್ಯುತ್ ಬಂತು ಆಗ ಪರಿಸ್ಥಿತಿ ಸುಧಾರಿಸಿಕೊಂಡಿದ್ದ ನಾಗೌಡರು ಅಲ್ಲೆ ಜಾಗ ಪಡೆದು ವಿದ್ಯುತ್ ಚಾಲಿತ ಸ್ಟುಡಿಯೋ ಹಾಗೂ ಒಂದು ಸ್ವಂತ ಮನೆಯನ್ನು ಕಟ್ಟಿಕೊಂಡರು. ಅದೇ ಸಂದರ್ಭದಲ್ಲಿ ಆ ಊರಲ್ಲಿ ಸಕ್ಕರೆ ಕಾರ್ಖಾನೆ ಪ್ರಾರಂಭವಾಯಿತು. ಉದ್ಯೋಗಕ್ಕಾಗಿ ಬಂದು ನೆಲೆಸುವ ಜನಸಂಖ್ಯೆ ಹೆಚ್ಚಾಯಿತು. ಇದರಿಂದ ಇವರ ಸುಭಾಷ ಫೋಟೋ ಸ್ಟುಡಿಯೋಕ್ಕೆ ಇನ್ನೂ ಹೆಚ್ಚಿನ ಚಾಲನೆ ದೊರೆತು ಸ್ವಲ್ಪ ದಿನದಲ್ಲೆ ಹೆಸರುವಾಸಿ ಆಯಿತು. ಯಾವ ಆತಂಕಗಳಿಲ್ಲದೇ ನಿರಾತಂಕವಾಗಿ ಮುನ್ನಡೆಯುವಾಗ ನಾಗೌಡರ ಅಂತರಂಗದಲ್ಲಿ ತಡೆಹಿಡಿದಿದ್ದ ಚಿತ್ರ ರಚನೆಯ ಆಸಕ್ತಿ ಮತ್ತೆ ಗರಿಗೆದರಲು ಪ್ರಾರಂಭಿಸಿತು.

ಇಬ್ಬರೂ ಗಂಡುಮಕ್ಕಳು ಒಬ್ಬರ ನಂತರ ಮತ್ತೊಬ್ಬರು ಇವರಿಗೆ ಸಹಾಯಕರಾಗಿ ನಿಂತು ಕೆಲವರ್ಷಗಳಲ್ಲೇ ಕರಗತ ಮಾಡಿಕೊಂಡು ಇನ್ನೇನು ಸ್ವತಂತ್ರವಾಗಿ ಚೆನ್ನಾಗಿ ನಡೆಸಿಕೊಂಡು ಹೋಗುತ್ತಾರೆಂಬ ಭರವಸೆ ಬಂದ ನಂತರ ಜವಾಬ್ದಾರಿಯನ್ನು ಅವರಿಗೆ ಹೊರಸಿ ಸಂಪೂರ್ಣವಾಗಿ ತಮ್ಮನ್ನು ಕಲಾ ಸೇವೆಗೆ ತೊಡಗಿಸಿಕೊಂಡರು. ಭಾವಚಿತ್ರಗಳ ಜೊತೆಗೆ ಇನ್ನಿತರ ಸಂಯೋಜನ ನಿಸರ್ಗ ಚಿತ್ರಗಳನ್ನು ಚಿತ್ರಿಸತೊಡಗಿದರು.

ಯಾವ ಕಲೆಯ ವಾತಾವರಣವೂ ಇಲ್ಲದ ಅಷ್ಟೊಂದು ಸುಧಾರಿಸದೇ ಹಳ್ಳಿಯ ಒಂದು ವಾತಾವರಣವನ್ನೇ ಹೊಂದಿದ ಸಂಕೇಶ್ವರದಲ್ಲಿ ಕಲೆಯ ಬಗ್ಗೆ ಆಸಕ್ತಿ ಮೂಡಿಸುವುದು ಅಷ್ಟೇ ಪ್ರಯಾಸಕರ ಕೆಲಸ ಆಗಿತ್ತು. ಇಂತಹ ಸ್ಥಿತಿಯಲ್ಲಿ ಯುವಕರಿಗೆ ಕಲೆಯ ಅಭಿರುಚಿ ಹುಟ್ಟುವಂತೆ ಮಾಡಬೇಕೆಂಬ ಮಹಾದಾಸೆ ನಾಗೌಡ ಅವರದು, ಅಂತೆಯೇ ತಮ್ಮ ಸ್ಟುಡಿಯೋದ ಒಂದು ಭಾಗವನ್ನು ಆರ್ಟ್‌ಗ್ಯಾಲರಿ ಮಾಡಿ ತಾವು ಜಲವರ್ಣ, ತೈಲವರ್ಣಗಳಲ್ಲಿ ರಚಿಸಿದ ನಿಸರ್ಗಚಿತ್ರ ಭಾವಚಿತ್ರ ಹಾಗೂ ಸಂಯೋಜನಾ ಚಿತ್ರಗಳನ್ನು ಮತ್ತು ಪೆನ್ಸಿಲ್ ಕರಡು ಚಿತ್ರಗಳನ್ನು ನೋಡಲು ದೊರೆಯುವಂತೆ ಪ್ರದರ್ಶಿಸಿದರು.

ಸಂಕೇಶ್ವರದಲ್ಲಿ ನಂತರದಲ್ಲಿ ಹುಟ್ಟಿಕೊಂಡ ಅಂಬೇಡಕರ ಕಲಾ ಶಾಲೆಗೆ ಹೋಗಿ ಅಲ್ಲಿ ಆಗಾಗ ಪ್ರಾತ್ಯೇಕ್ಷತೆ ಮಾಡಿ ತೋರಿಸಿ ಅಲ್ಲಿಯ ವಿದ್ಯಾರ್ಥಿಗಳಿಗೆ ಚಿತ್ರ ರಚನೆಯ ವಿಧಿ-ವಿಧಾನಗಳನ್ನು ಹೇಳಿಕೊಡುತ್ತಿದ್ದರು. ಅನೇಕ ವಿದ್ಯಾರ್ಥಿಗಳನ್ನು ಮನೆಗೆ ಕರೆದು ತಾವು ಮಾಡುವ ಚಿತ್ರಗಳನ್ನು ತೋರಿಸುತ್ತಿದ್ದರು. ನಿಜವಾದ ಕಲಾವಿದನಾಗಬೇಕಾದರೆ ಚಿತ್ರಗಳನ್ನು ತಮ್ಮ ಭಾವದೊಂದಿಗೆ ಮೂಡಿಸಬೇಕು ಎನ್ನುವ ಮನೋಧರ್ಮದವರು. ಅದನ್ನೇ ವಿದ್ಯಾರ್ಥಿಗಳಿಗೆ ಕಲಾಸಕ್ತರಿಗೆ ಹೇಳಿಕೊಡುತ್ತಿದ್ದರು. ಅಲ್ಲದೇ ಕಲಾವಿದನಾದವನು ತನ್ನ ಅಂತಃ ಚಕ್ಷುಗಳಿಂದ ಪ್ರಕೃತಿಯ ಮೂಲಪ್ರಧಾನ ಗುಣವನ್ನು ತನ್ನ ಕಲಾಕೃತಿಯಲ್ಲಿ ಸಮೀಕರಿಸುತ್ತಾನೆ. ಅಂತಹ ಒಳಗಣ್ಣು ಕಲಾವಿದನಲ್ಲಿ ಜಾಗೃತವಾದಾಗಲೇ ಅದು ಕಲಾಕೃತಿಯಾಗುತ್ತದೆ ಎನ್ನುವ ಅಂಶಗಳನ್ನು ವಿದ್ಯಾರ್ಥಿಗಳಿಗೆ ಹೇಳುತ್ತಿದ್ದರು. ಇದರಿಂದ ಅವರೂ ಅನುಭವ ಪಡೆದು ಬೆಳೆಯಲಿ ಅನ್ನುವಂತಹ ವಿಶಾಲವಾದ ಮನಸ್ಸು ಅದರಿಂದ ಅವರಿಗೆ ಆನಂದವೂ ದೊರಕುತ್ತಿತ್ತು. ಯಾವುದೇ ಆಸೆ ಇಲ್ಲದೇ ಕಲಾ ಸೇವೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡಿದ್ದರು. ಇದು ಅವರ ಆತ್ಮತೃಪ್ತಿಯಾಗಿತ್ತು.

ಮನೆ ಮಟಗಳಿಂದ ಇವರಿಗೆ ಚಿತ್ರ ರಚಿಸಲು ಕರೆ ಬಂದಿತು. ಬೈಲಹೊಂಗಲ ಇಂಚಲಶ್ರೀ ಮಠದಲ್ಲಿ, ನಿಡಸೋಸಿ ಮಠದಲ್ಲಿ ಜೀವಮಾದರಿ ಸ್ವಾಮೀಜಿಯವರ ಚಿತ್ರಗಳನ್ನು ರಚಿಸಿಕೊಟ್ಟಿದ್ದಾರೆ. 5'x7' ಕ್ಯಾನವಾಸ್ ಮೇಲೆ ಕಥಾ ಆಧಾರಿತ ಪೌರಾಣಿಕ ಅನ್ನಪೂರ್ಣೇಶ್ವರಿ ಚಿತ್ರ ತೈಲಮಾಧ್ಯಮದಲ್ಲಿ ಚಿತ್ರಿಸಿದ್ದಾರೆ. ಹಾಗೆ ಹುಬ್ಬಳ್ಳಿ, ಬೆಳಗಾವಿ, ಬೆಂಗಳೂರು, ಗಡಿಹಿಂಗ್ಲಜ, ನಿಪ್ಪಾಣಿ, ಚಿಕ್ಕೋಡಿ, ಹೆಬ್ಬಾಳ, ಅಮ್ಮಣಗಿ, ಗೋಕಾಕ್, ಸಂಕೇಶ್ವರದಲ್ಲಿ ನೂರಾರು ಭಾವಚಿತ್ರ ಹಾಗೂ ನಿಸರ್ಗ ಸಂಯೋಜನ ಚಿತ್ರಗಳನ್ನೂ ರಚಿಸಿಕೊಟ್ಟಿದ್ದಾರೆ.

ಮುಂಬಯಿಯಲ್ಲಿ ಇದ್ದಾಗ ಇವರ ಎಷ್ಟೋ ಪ್ರಾಸಂಗಿಕ ಚಿತ್ರಗಳು ಮರಾಠಿಮೌಜ, ಕಿರ್ಲೋಸ್ಕರ ಮತ್ತು ಗುಜರಾತಿ ಮಾಸಪತ್ರಿಕೆಗಳಲ್ಲಿ ಹಾಗೂ ಇಲ್ಲ್ಯುಸ್ಟ್ರೆಡ್ ವೀಕ್ಲಿಯಲ್ಲೂ ಪ್ರಕಟವಾದದ್ದುಂಟು. ಕೊಲ್ಹಾಪುರ ಮತ್ತು ಮುಂಬಯಿಯಲ್ಲಿ ಚಿತ್ರಗಳ ರಚನೆ ಮಾಡಿದ ಸಂದರ್ಭದಲ್ಲಿ ಇವರು ಸಿ.ಪಿ. ಅಮ್ಮಣಗೀಕರ ಅಂತಲೇ ಸಹಿ ಹಾಕಿ ತಮ್ಮನ್ನು ಗುರ್ತಿಸಿಕೊಂಡಿದ್ದರು. ಕಾರಣ ಅಮ್ಮಣಗಿ ಕರ್ನಾಟಕ ಮತ್ತು ಮಹಾರಾಷ್ಟ್ರದ ಗಡಿಭಾಗದಲ್ಲಿದ್ದು ಅದು ಇವರ ಜನ್ಮಸ್ಥಳವೂ ಕೂಡಾ ಕೊಲ್ಹಾಪುರದ ಜನ ಇವರನ್ನು ಅಮ್ಮಣಗಿ ಊರಿನ ಹೆಸರಿನಿಂದಲೇ ಕರೆಯುತ್ತಿದ್ದರಿಂದ ಸಹಜವಾಗಿಯೇ ಅಮ್ಮಣಗೀಕರ ಆದರು ತಿರುಗಿ ಸಂಕೇಶ್ವರಕ್ಕೆ ಬಂದು ಇಲ್ಲೇ ನೆಲೆಸಿದ ನಂತರ ಇವರು

ತಮ್ಮ ಮೂಲ ಮನೆತನದ ಹೆಸರಾದ ನಾಗೌಡ ಎಂಬ ಹೆಸರಿನಿಂದಲೇ ಪ್ರಸಿದ್ಧಿಯನ್ನು ಹೊಂದಿದರು. ಅದು ಮುಂದೆ ಶಾಶ್ವತವೂ ಆಯಿತು.

## ಕಲಾ ಸೃಷ್ಟಿ

ನೈಜಕಲೆ ಅಮೂರ್ತರೂಪದ ಆಧುನಿಕ ಕಲೆ ಎಂಬ ವರ್ಗೀಕರಣ ಇಂದಿನ ಸಮಕಾಲೀನ ಕಲಾ ಸಂದರ್ಭದಲ್ಲಿ ಕೇಳಿ ಬರುತ್ತಿದೆಯಾದರೂ ಕಲಾವಿದರ ವೈಯಕ್ತಿಕ ಮನೋಧರ್ಮದ ಮೇಲೆ ಅವರವರ ಆಯ್ಕೆಯಾಗಿರುತ್ತದೆ. ನಾಗೌಡ ಅವರು ವಿಶೇಷವಾಗಿ ನೈಜಕಲೆಯಲ್ಲೇ ತಮ್ಮನ್ನು ತೊಡಗಿಸಿಕೊಂಡು ಕಲಾಕೃತಿಗಳನ್ನು ರಚಿಸಿದ್ದಾರೆ. ನಾಗೌಡ ಅವರ ಸಮಕಾಲೀನ ಕಲಾವಿದರಾದ ದಂಡಾವತಿಮಠ, ಅಲ್ಮೇಲಕರ, ಹಾಲಭಾವಿ, ಮಿಣಜಗಿ, ಎಂ. ಎ.ಚೆಟ್ಟಿ, ಅಚರೇಕರ, ಎಸ್.ಎಂ. ಪಂಡಿತ ಮುಂತಾದವರು ರಚಿಸುವಂಥ ಭಾವಚಿತ್ರ, ನಿಸರ್ಗಚಿತ್ರ, ಧಾರ್ಮಿಕ ಸಂಯೋಜನ ಕೃತಿಗಳ ರಚನೆಯ ನೈಜ ಶೈಲಿಯೇ ನಿಜವಾದ ಗಂಭೀರ ಕಲೆಯಾಗಿದ್ದಿತು. ಹೀಗಾಗಿ ನಾಗೌಡ ಅವರು ಇದರಿಂದ ಹೊರತಾಗಿಲ್ಲ.

ಅವರ ಕಾಲದಲ್ಲಿ ಕಲಾಕ್ಷೇತ್ರದಲ್ಲಿ ಬದಲಾದ ಸೃಷ್ಟಿಗಳಿಗೆ ಅನೇಕ ಕಲಾವಿದರು ಸ್ಪಂದಿಸದಂತಹ ಸಂದಿಗ್ಧ ಸ್ಥಿತಿಯಲ್ಲಿದ್ದರು. ತಾವು ಅಭ್ಯಸಿಸಿದ ಕಂಡುಕೊಂಡಂತ ನೈಜ ಶೈಲಿಯ ಚಿತ್ರರಚನೆಯಲ್ಲೇ ಜೀವನಾಧಾರಕ್ಕೆ ದಾರಿ ಇದೆ ಎಂದು ಭಾವಿಸಿದವರು, ಆದರೆ ಅಮೂರ್ತ ಆಧುನಿಕತೆಯ ಅನಿಶ್ಚಿಯ ಸ್ಥಿತಿ ಕಲೆಯ ಉದ್ದೇಶ ಆದರ್ಶಗಳೇನೆ ಇದ್ದರು ಕಲೆಗಾಗಿ ಕಲೆ ಎಂಬ ಸತ್ಯ ಇವರಿಗೆ ಹೊಸತು ಹಾಗಾಗಿ ಹೊಸದರ ಬಗ್ಗೆ ಅಷ್ಟೊಂದು ಆಸಕ್ತಿಯನ್ನು ಇವರು ಹೊಂದಿರಲಿಲ್ಲ. ಅಲ್ಲದೇ ಈ ರೀತಿ ಚಿತ್ರ ರಚಿಸುವ ಮನೋಕಲ್ಪನೆಯ ಆಯಾ ಕಲಾವಿದನ ವೈಯ್ಯಕ್ತಿಕ ಸ್ವಾತಂತ್ರ್ಯದ ವಿಚಾರವಾಗಿದೆ.

ಆಧುನಿಕ ಕಲಾ ಪ್ರವಾಹದ ವಿವಿಧ ಸಿದ್ಧಾಂತ ಶೈಲಿ ಆಶಯಗಳ ಹಿನ್ನಲೆಯಲ್ಲಿ ಯಾವುದೇ ಒಬ್ಬ ಕಲಾವಿದನ ಯಾವುದೇ ಒಂದು ಕೃತಿ ಸರ್ವಕಾಲಿಕ ಮಹತ್ವವನ್ನ ಪಡೆದು ಬದುಕಲು ಸಾಧ್ಯವಿಲ್ಲ ಎಲ್ಲವೂ ಪ್ರಯೋಗದ ಮಟ್ಟದಲ್ಲಿ ಪ್ರಸ್ತುತತೆ ಪಡೆಯುತ್ತದೆ ಎಂಬುದು ಎಷ್ಟು ಸತ್ಯವೋ ಅಷ್ಟೇ ಸತ್ಯ ನೈಜಕಲೆ ಸರ್ವಕಾಲೀಕ ಎಂಬುದು ಯಾಕೆಂದರೆ ಸಾಮಾನ್ಯವಾಗಿ ರಸಿಕ ನೋಡುಗನು ಕಲಾಕೃತಿಯಲ್ಲಿ ತನ್ನ ಅನುಭವಕ್ಕೆ ಬಂದ ವಸ್ತುಗಳ ಸಾದೃಶ್ಯತೆಯನ್ನು ಹುಡುಕುವುದು ಸಹಜ ಇಂದಿಗೂ ಪಾಶ್ಚಾತ್ಯ ಕಲಾ ಸಂಗ್ರಹಾಲಯಗಳ ರೆಂಬ್ರಾಂಟ್, ಲಿಯೋನಾರ್ಡೋ, ಡ.ವಿಂಚಿ, ಮೈಕಲೆಂಜೆಲೋರಂತಹ ನೈಜ ಕಲಾಕೃತಿಗಳನ್ನು ಅಪೂರ್ವ ವಿಧಿಯಂತೆ ರಕ್ಷಿಸಿಕೊಂಡು ಬಂದಿದ್ದಾರೆ, ಅಲ್ಲದೇ ಆ ಕೃತಿಗಳನ್ನು ಇಂದಿಗೂ ತಮ್ಮ ಪ್ರಸ್ತುತತೆಯನ್ನು ಉಳಿಸಿಕೊಂಡು ಜಗತ್ತಿನ ಅಸಂಖ್ಯಾತ ಜನರ ಮನ ಆಕರ್ಷಿಸುವುದನ್ನು ಕಂಡುಕೊಂಡಾಗ ಇಂತಹ ನೈಜಕಲೆ ಸರ್ವಕಾಲಕ್ಕೂ ಮನನೀಯವಾದುದೆಂದರೆ ತಪ್ಪಲ್ಲ. ನಮ್ಮಲ್ಲಿಯೂ ಇಂತಹ ಸಂಪ್ರದಾಯ ಬೆಳೆದು ಬಂದಿರುವುದನ್ನು ಕಾಣುತ್ತೇವೆ. ಸಾದೃಶ್ಯದ ಅಂಶ ನೈಜಕತೆಯಲ್ಲಿ ಹೆಚ್ಚಾಗಿರುವುದರಿಂದ ಈ ಕಲೆಯು ಜನರ ರಸಾನಂದಕ್ಕೆ ಹತ್ತಿರವಾಗುತ್ತದೆಯಾದ್ದರಿಂದ ಅಂದಿನ ಸಮಾಜ ಯಾವುದನ್ನು ಒಪ್ಪಿಕೊಳ್ಳುತ್ತಿತ್ತೊ ಅಂತಹ ನೈಜ ಶೈಲಿಯನ್ನೆ ನಾಗೌಡರು ತಮ್ಮ ವಸ್ತು ವಿಷಯಗಳಿಗುಣವಾಗಿ ಕರಗತ ಮಾಡಿಕೊಂಡು ಅದನ್ನೇ ಮುಂದುವರೆಸಿಕೊಂಡು ಬಂದರು.

ಆದ್ದರಿಂದ ಕಲಾಕೃತಿಯ ಕಲಾವಿದನ ಸಮಗ್ರ ಜೀವನದ ಪ್ರತಿಬಿಂಬದಂತೆ ಹೇಗೋ ಹಾಗೇ ಕಲಾವಿದನು ಸಮಗ್ರ ಜನಾಂಗದ ಪ್ರತಿಬಿಂಬವಾಗಿದ್ದಾನೆ. ಸಮಾಜ ಒಪ್ಪಿದ್ದನ್ನೆ ಕಲಾವಿದರು ಚಿತ್ರಿಸಿದರು ಮತ್ತು ಅದರ ಬಗ್ಗೆ ಅವರಿಗೆ ಸಮಾಧಾನ ತೃಪ್ತಿಯು ಆಗುತ್ತಿತ್ತು. ಇದಕ್ಕೆ ನಾಗೌಡರು ಹೊರತಾಗಿಲ್ಲ.

**ವರ್ಣಚಿತ್ರಗಳು**

ಮುಂಬಯಿಯ ಕಲಾವೃತ್ತಿಯಿಂದ ತಿರುಗಿ ಬಂದ ನಂತರ ಅದೇ ಅಕಾಡೆಮಿಕ್ ಶೈಲಿಯ ಜಲವರ್ಣ, ತೈಲವರ್ಣ, ಪೆನ್ಸಿಲ್ ಹಾಗೂ ಕೆಲವೊಂದು ಸ್ಟಾಂಪಿಂಗ್ ವಿಧಾನದಲ್ಲಿಯೂ ಚಿತ್ರಗಳ ರಚನೆಯನ್ನು ಮಾಡಿದ್ದಾರೆ. ನಿಸರ್ಗ ಚಿತ್ರವಾಗಲಿ, ಭಾವಚಿತ್ರವಾಗಲಿ ಹೆಚ್ಚಾಗಿ ಜಲವರ್ಣಗಳಲ್ಲಿ ರಚಿಸಿದ್ದಾರೆ. ಅದು ಪಾರದರ್ಶಿಕೆಯ ವಿಧಾನದಲ್ಲಿ ಇದು ಅತ್ಯಂತ ಉತ್ತಮವಾದ ಮಾಧ್ಯಮವಾಗಿದೆ ಯಲ್ಲದೇ ಅಷ್ಟೇ ಕಠಿಣವಾದ ಮಾಧ್ಯಮವಾಗಿದೆ. ಭಾರತದಲ್ಲಿ ಮೊದಲಿನಿಂದಲೂ ಜಲವರ್ಣಕ್ಕೆ, ಹೆಚ್ಚಿನ ಪ್ರಾಧಾನ್ಯತೆ ನೀಡಲಾಗಿದೆ. ನಾಗೌಡರವರು ತಮ್ಮ ಗುರುಗಳು ಹಾಗೂ ಅನೇಕ ಕಲಾವಿದರಿಂದ ಜಲವರ್ಣದ ಚಿತ್ರ ರಚನೆಯ ತಂತ್ರವನ್ನು ಅರಿತು ಈ ಮಾಧ್ಯಮದಲ್ಲಿ ಅದ್ಭುತ ಸಾಧನೆ ಮಾಡಿದ ಕಲಾವಿದರು ಹೆಚ್ಚಾಗಿ ಕಲಾವಿದರು ಜಲವರ್ಣಗಳನ್ನು ನಿಸರ್ಗ ಚಿತ್ರ ರಚಿಸಲು ಬಳಸುತ್ತಾರೆ, ಆದರೆ ನಾಗೌಡರವರು ಭಾವಚಿತ್ರ ಜೀವ ಮಾದರಿ ಚಿತ್ರ, ನಿಸರ್ಗ ಚಿತ್ರ ಹಾಗೂ ಸಂಯೋಜನಾ ಚಿತ್ರಗಳನ್ನು ರಚಿಸಲು ದುಡಿಸಿಕೊಂಡಿದ್ದಾರೆ. ಇದರಿಂದ ಜಲವರ್ಣಗಳ ಮೇಲಿನ ಅವರ ಹಿಡಿತ ಪ್ರೌಢಿಮೆಯ ಅರಿವಾಗುತ್ತದೆ.

ನಿಸರ್ಗ ಚಿತ್ರ ರಚಿಸುವುದೆಂದರೆ ಇವರಿಗೆ ಎಲ್ಲಿಲ್ಲದ ಆನಂದ ಕಾರಣ ನಿಜವಾದ ಕಲಾವಿದನಾಗುವವನು ಬಣ್ಣಗಳ ಬಗ್ಗೆ ಅರಿತುಕೊಳ್ಳಬೇಕಾದರೆ ನಿಸರ್ಗದ ಮಡಿಲಲ್ಲಿ ಚಿತ್ರಗಳ ರಚನೆ ಮಾಡಬೇಕು. ಅಂದರೆ ಸೂರ್ಯನ ಬೆಳಕಿನಲ್ಲಿ ಉಂಟಾಗುವ ಬಣ್ಣಗಳ ಬದಲಾವಣೆ ಮತ್ತು ಛಾಯೆಗಳ ಚಕ್ಕಂದದಾಟ ವರ್ಣಗಳ ಏರಿಳಿತಗಳು, ಭಾವನೆಗಳಿಗೆ ಸ್ಪಂದಿಸಿ ನಿಜವಾದ ಆನಂದ ಅರಿವನ್ನು ನೀಡುತ್ತವೆ ಎನ್ನುತ್ತಾರೆ.

ಇವರು ರಚಿಸಿದ ನಿಸರ್ಗ ಚಿತ್ರಗಳು ನೋಡಿದ ತಕ್ಷಣ (Old master) ಹಳೆಯ ಪಾಶ್ಚಾತ್ಯಾ ಶ್ರೇಷ್ಠ ಕಲಾವಿದರ ಚಿತ್ರದಂತೆ ಕಾಣುತ್ತವೆ. ಅಂದರೆ ಈ ಚಿತ್ರಗಳಲ್ಲಿ ಅವರು ಅಭ್ಯಾಸಿಸಿದ ಸಂಪೂರ್ಣ ಪಾಶ್ಚಾತ್ಯ ಶೈಲಿಯ ಪ್ರಭಾವವನ್ನೇ ಕಾಣಬಹುದು ಇದಕ್ಕೆ ಕಾರಣವೂ ಇದೆ. ಏಕೆಂದರೆ ಹಿಂದಿನಿಂದ ಇದುವರೆಗೂ ಭಾರತೀಯ ಭೂದೃಶ್ಯಕಲೆ ತನ್ನದೇ ಆದ ವೈಶಿಷ್ಟ್ಯ ಪೂರ್ಣವಾದ ಶೈಲಿಯನ್ನು ಕಂಡುಕೊಂಡಿಲ್ಲ. ಆದ್ದರಿಂದ ಭಾರತೀಯ ಕಲಾವಿದರೆಲ್ಲರೂ ಈ ನಿಟ್ಟಿನಲ್ಲಿ ಯುರೋಪಿಯನ್ ಕಲಾವಿದರ ಹೆಜ್ಜೆಯನ್ನೇ ಅನುಸರಿಸಿರುವುದನ್ನು ಕಾಣುತ್ತೇವೆ. ಇದಕ್ಕೆ ನಾಗೌಡರು ಹೊರತಾಗಿಲ್ಲ.

ಇವರ ಕೊಲ್ಹಾಪುರದ 'ಸಿವಿಲ್ ಹಾಸ್ಪಿಟಲ್' ಹಾಗೂ 'ಹಳೆಯ ರಾಜವಾಡೆ' ಚಿತ್ರಗಳನ್ನು ನೋಡಿದಾಗ ಇಲ್ಲಿ ಪ್ರತಿಯೊಂದನ್ನು ವಿವರವಾಗಿ ಚಿತ್ರಿಸಿದ್ದಾರೆ. ಅಲ್ಲಿ ಅವರು ಬಳಸಿರುವ ಕೆಲವೇ ಬಣ್ಣಗಳು ಅದರಲ್ಲಿಯೂ ಅವರು ಬಳಸಿದ ನೀಲ ವರ್ಣ ಕಟ್ಟಡದ ಗಟ್ಟಿತನದ ಅನುಭವವನ್ನು

ನೀಡುತ್ತವೆ. ಬರಿ ನೀಲಿ, ಹಳದಿ ಮತ್ತು ಕಂದುಬಣ್ಣಗಳನ್ನು ಮಾತ್ರವೇ ಬಳಸಿದರೂ ಚಿತ್ರಗಳೂ ಎಲ್ಲಿಯೂ ಮಾಸದಂತೆ ತಮ್ಮ ತಾಜಾತನವನ್ನು ಹಾಗೂ ಸಿರಿವಂತಿಕೆಯನ್ನು ಉಳಿಸಿಕೊಂಡುಬಂದಿವೆ. ಆ ಚಿತ್ರಗಳಲ್ಲಿಯ ವಸ್ತುಗಳು ಮೈವಳಿಕೆ, ನೆರಳು, ಬೆಳಕಿನ ವಿಭಜನೆ, ಹಾಗೂ ಜನರು ಚಲಿಸುತ್ತಿರುವಂತಹ ಚಲನೆ, ಕಟ್ಟಡದ ಸೂಕ್ಷ್ಮತೆ ಅಲ್ಲಿ ಬಳಸಿರುವ ಪಾರದರ್ಶಕತೆಯ ಜಲವರ್ಣ ವಿಧಾನ, ಛಾಯಾಮೌಲ್ಯ, ದೃಶ್ಯಾಂತರದ ಅನುಭವಗಳು ಅವರ ಅಭಿವ್ಯಕ್ತಿ ಸಾಮರ್ಥ್ಯದ ವಿಶಿಷ್ಟತೆಯನ್ನು ನಮಗೆ ಮನದಟ್ಟು ಮಾಡಿಸುತ್ತದೆ.

ಕಲಾವಿದನ ಪ್ರೌಢಿಮ ಅಭಿವ್ಯಕ್ತಿ ಸಾಮರ್ಥ್ಯ ಪ್ರಕಟವಾಗುವುದು ಅವನು ಆರಿಸಿಕೊಂಡ ವಸ್ತು ಮತ್ತು ಅದರ ನಿರ್ವಹಣೆಯಲ್ಲಿ ಇವರ ಭೂದೃಶ್ಯದಲ್ಲಿ ಗಮನಿಸಬೇಕಾದ ಅತಿ ಮುಖ್ಯವಾದ ಅಂಶವೆಂದರೆ ಚಿತ್ರಣಕ್ಕಾಗಿ ಆರಿಸಿಕೊಂಡ ಭೂಭಾಗ ದೃಶ್ಯ ಮತ್ತು ನಿರ್ವಹಣೆ ಇದಕ್ಕೆ ಉದಾಹರಣೆ ಎಂದರೆ ಅವರು ಚಿತ್ರಿಸಿದ ಕೊಲ್ಹಾಪುರದ ಮಹಾಲಕ್ಷ್ಮಿ ದೇವಸ್ಥಾನದ ಚಿತ್ರ ಅತ್ಯಂತ ಉತ್ಕೃಷ್ಟವಾಗಿದೆ. ಇಲ್ಲಿ ಅವರು ಆಯ್ದುಕೊಂಡ ಕಟ್ಟಡದ ಭಾಗ ಅದನ್ನು ಸಂಯೋಜಿಸಿದ ರೀತಿ ಉತ್ತಮ ಅಕಾಡೆಮಿಕ್ ಸಂಯೋಜನಾ ವಿಧಾನವಾಗಿದೆ. ಬೆಳಗಿನ ಹೊತ್ತೇರಿದ ನಂತರ ರಚಿಸಿದ ಚಿತ್ರ ಇದಾಗಿದೆ. ಭವ್ಯವಾದ ದೇವಾಲಯದ ಹಿಂಭಾಗ ಬಿಸಿಲು ನೆರಳಿನ ಛಾಯಾಂಕನೆ ಪಾರದರ್ಶಿಕೆ ವರ್ಣಗಳ ಬಳಕೆ, ನೆರಳಿನಲ್ಲಿ ವಿಶ್ರಮಿಸುತ್ತಿರುವ ಹಾಗೂ ಬಿಸಿಲಲ್ಲಿ ನಡೆದು ಗುಡಿಸುತ್ತಿರುವ ಜನ ದೇವಾಲಯದ ಮೈವಳಿಕೆ ಸೂಕ್ಷ್ಮಕೆತ್ತನೆಯ ನಕ್ಷೆ ಕಲ್ಲಿನ ಗಟ್ಟಿತನ ಇದರೆಲ್ಲದರ ಅನುಭವ ನೀಡುತ್ತದೆ. ದೇವಾಲಯ ಹಾಗೂ ಜನರ ನೆರಳಿನ ಛಾಯಾಂಕನೆ ನಮಗೆ ಸಮಯವನ್ನು ಸಹ ತಿಳಿಸುತ್ತದೆ. ಹೀಗೆ ಪ್ರತಿಯೊಂದು ವಸ್ತುವಿನ ಸೂಕ್ಷ್ಮತೆಯನ್ನು ಸ್ಪಷ್ಟವಾಗಿ ಅಭಿವ್ಯಕ್ತಿಸಿದ ಅವರ ಪ್ರತಿಭಾಶಕ್ತಿ ನಿಜವಾಗಿಯೂ ಪ್ರಶಂಸನೀಯವಾದುದು.

ನಿಸರ್ಗ ಚಿತ್ರಗಳಂತೆ ಭಾವಚಿತ್ರ ರಚಿಸುವುದರಲ್ಲಿಯೂ ಇವರು ಸಿದ್ಧಹಸ್ತರು ಅಕಾಡೆಮಿಕ್ ಶೈಲಿಯ ಭಾವಚಿತ್ರಗಳನ್ನೇ ಇವರು ಚಿತ್ರಿಸಿದ್ದಾರೆ. ಕಾರಣ ಇವರ ಕಾಲದಲ್ಲಿ ಭಾವಚಿತ್ರರಚನೆಯು ಕಲಾಕಾರನ ವೃತ್ತಿಯ ಗೌರವಯುತವಾದ ಪ್ರಮುಖ ಅಂಗವಾಗಿತ್ತು. ಅಲ್ಲದೇ ವರ್ಣ ಛಾಯಾಚಿತ್ರಣ ಪ್ರಚಲಿತಕ್ಕೆ ಬರುವ ಮೊದಲು ಪ್ರತಿಯೊಬ್ಬ ಕಲಾವಿದನು ಚಿತ್ರಿಸಲು ಕಲಿಯಬೇಕಾಗಿದ್ದ ಕೆಲಸ ಇದಾಗಿತ್ತು. ಕೆಲವು ಸಾರೆ ಛಾಯಾಚಿತ್ರಗಳನ್ನು ನೋಡಿ ಚಿತ್ರಿಸಿದರೆ ಇನ್ನೂ ಕೆಲವು ಕೃತಿಗಳನ್ನು ರೂಪದರ್ಶಿಗಳನ್ನು ಬಳಸಿ ಚಿತ್ರಿಸಿದ್ದವು ಆಗಿವೆ. ಭಾವಚಿತ್ರ ಒಂದು ಕಷ್ಟಕರವಾದ ಕಲೆ ಇದು ಎಲ್ಲ ಚಿತ್ರಗಳಂತೆ ಅಲ್ಲ. ಇಲ್ಲಿ ಮುಂದೆ ಇರುವ ರೂಪದರ್ಶಿಯನ್ನು ಕಣ್ಣಿಗೆ ಕಂಡಂತೆ ನೆರಳು ಬೆಳಕು ಛಾಯೆ ಮೂಡಿಸಿದ ಮನುಷ್ಯರೂಪದ ಸಾಮಾನ್ಯ ಚಿತ್ರವಲ್ಲ. ಚಿತ್ರಿಸಿದಂಥ ಚಿತ್ರ ರೂಪದರ್ಶಿಗಳನ್ನು ಹೋಲುವುದರ ಜೊತೆಗೆ ಮುಖ್ಯವಾಗಿ ರೂಪದರ್ಶಿಯ ಅಂತಃ ಸತ್ವವನ್ನೇ ಹಿಡಿದಿಡುವ ವ್ಯಕ್ತಪಡಿಸುವ ಯತ್ನವಿರುತ್ತದೆ. ಇಂತಹ ಅಕಾಡೆಮಿಕ್ ಶೈಲಿಯ ಭಾವಚಿತ್ರ ರಚನೆ ಕ್ರಮೇಣವಾಗಿ ಕಲಾಕ್ಷೇತ್ರದಿಂದ ಕಣ್ಮರೆಯಾಗುತ್ತಿರುವ ಸಂದರ್ಭದಲ್ಲಿ ಅದನ್ನು ಜೀವಂತಗೊಳಿಸಿ ಮುಂದುವರೆಸಿಕೊಂಡು ಬಂದವರಲ್ಲಿ ನಾಗೌಡ ಒಬ್ಬರು.

ಭಾವಚಿತ್ರ ರಚನೆಯಲ್ಲಿ ರೂಪದರ್ಶಿಯ (ತದ್ರೂಪತೆ) 'ಹೂಬಾಹೂಬ' ಚಿತ್ರಿಸುವುದಕ್ಕೆ ಬಹಳ ಮಹತ್ವವಿದೆ. ಹಾಗೆಯೇ ಆ ರೂಪದರ್ಶಿಯ ಸೂತ್ತಲೂ ಪ್ರತಿಫಲಿಸುವ ಬಣ್ಣಗಳು ರೂಪದರ್ಶಿಯ ಮೂಲ ಬಣ್ಣದ ಜೊತೆಗೂಡಿ ಪ್ರಭಾವ ಬೀರುತ್ತದೆ. ಕಲಾವಿದನಾದವನು ಇಂತಹ ಅಂಶಗಳನ್ನು ಗಮನಿಸಬೇಕು ಎಂಬುದು ನಾಗೌಡರ ಹೇಳಿಕೆಯಾಗಿದೆ. ಅನೇಕ ಭಾವಚಿತ್ರ ಹಾಗೂ ಜೀವಮಾದರಿ ಚಿತ್ರಗಳನ್ನು ಜಲ ಹಾಗೂ ತೈಲ ವರ್ಣಗಳ ಮಾಧ್ಯಮದಲ್ಲಿ ರಚಿಸಿದ್ದಾರೆ.

ಶತಾಯುಷಿಯಾದ ಅಮ್ಮಣಗಿಯ ಹಿರಿಯ ರೈತ ಚನ್ನಪ್ಪಜ್ಜನ ಜೀವಮಾದರಿ ಚಿತ್ರ ತೈಲವರ್ಣದಲ್ಲಿ ಚಿತ್ರಿಸಿದ್ದು ಇಲ್ಲಿ ಅಜ್ಜನ ಮುಖದಲ್ಲಿ ಮುಪ್ಪಿನ ಭಾಗದ ತೀವ್ರತೆ ಕಾಣುತ್ತದ. ತಲೆಯ ಮೇಲಿನ ರುಮಾಲು, ತೊಟ್ಟ ಅಂಗಿ, ಅರಿವೆಯ ಪ್ರತಿಯೊಂದು ಮಡಿಕೆಯನ್ನು ತ್ರಿಮಾನದಲ್ಲಿ ಚಿತ್ರಿಸಿದ್ದಾರೆ. ಅಂಗಿಗೆ ಕಟ್ಟಿದ ಕಸಿ ಅಲ್ಲಿಯೂ ಸಹಿತ ನೆರಳು-ಬೆಳಕಿನ ಛಾಯಾಂಕನೆಯನ್ನು ತೋರಿಸುವುದರ ಮೂಲಕ ಅವರ ಅತ್ಯಂತ ಸೂಕ್ಷ್ಮ ತೀಕ್ಷ್ಣ ಅವಲೋಕದ ಅರಿವು ನೋಡುಗನಿಗೆ ನೀಡುತ್ತದೆ.

1936ರಲ್ಲಿ ಜಲವರ್ಣದಲ್ಲಿ ರಚಿಸಿದ ರೂಪದರ್ಶಿ ತಾತ್ಯಾಸಾಹೇಬ ಇನಾಮದಾರ ಅವರದು, ಇಲ್ಲಿ ಕುಂಚದ ಎಳೆತಗಳನ್ನು ಬಣ್ಣದ ಹಿಡಿತ, ಒಂದರ ಪಕ್ಕದಲ್ಲಿ ಇನ್ನೊಂದು ವರ್ಣವನ್ನಾರಿಸಿ ಪರಿಣಾಮವನ್ನು ನಿರ್ಮಿಸಿರುವುದನ್ನು ಕಾಣುತ್ತೇವೆ. ಆದರೆ ಛಾಯಾಚಿತ್ರ ಆದರಿಸಿ ಚಿತ್ರಿಸಿದ ಕಲಾಕೃತಿಗಳಲ್ಲಿ ಬಣ್ಣಗಳ ಬೆರಿಕೆ ಹಾಗೂ ಮೃದು ಚಲನೆಯನ್ನು ಕಾಣುತ್ತೇವೆ. ಈ ಚಿತ್ರದಲ್ಲಿ ಬೆಳಕು ರೂಪದರ್ಶಿಯ ಬಲಭಾಗದಿಂದ ಬಂದಿರುವುದರಿಂದ ಎಡಭಾಗದಲ್ಲಿ ನೆರಳನ್ನು ಚಿತ್ರಿಸಿದ್ದಾರೆ. ಇದರಿಂದ ತ್ರಿಮಾನದ ಕಲ್ಪನೆಕೊಡಲು ಸಾಧ್ಯ. ಮುಖದ ಮೇಲೆ ವಯಸ್ಸನ್ನು ಸೂಚಿಸುವ ನೆರಿಗೆಗಳ ಜೊತೆಗೆ ಚರ್ಮದ ಪರಿಣಾಮವಿದೆ ಮೂಗು ಹಾಗೂ ಹಣೆಯ ಮೇಲೆ ಪ್ರಮುಖ ಬೆಳಕು, ಬಿಳಿಮೀಸೆ, ಹಣೆಯ ಮೇಲಿನ ಕೆಂಪು ತಿಲಕ ಮುಖದ ವರ್ಣದೊಂದಿಗೆ ಬೆರೆತಿರುವ ರೀತಿ ಕಣ್ಣಿನಲ್ಲಿ ಜೀವಂತಿಕೆ ಇದೆ.

ತಲೆಯ ಮೇಲಿನ ಬಿಳಿ ರುಮಾಲು, ಬಿಳಿಶಲ್ಯ ಹಾಗೂ ಬಿಳಿಯ ಕೋಟಿನ ಛಾಯೆಯನ್ನು ನೀಲವರ್ಣದ ಕುಂಚದ ಎಳೆತಗಳಿಂದ ತೋರಿಸಿದ್ದಾರೆ. ಹತ್ತಿ ಬಟ್ಟೆಯ ಮೈವಳಿಕೆ ಹಾಗೂ ಅರಿವೆಯ ಮಡಿಕೆಗಳನ್ನು ಅದರಲ್ಲಿ ಪಿಂಗಡಿಸಿದ ನೆರಳು ಬೆಳಕು ಕುಂಚದ ಎಳೆತ ಸ್ಪಷ್ಟವಾಗಿ ಪರಿಣಾಮಕಾರಿಯಾಗಿ ಅನುಭವಕ್ಕೆ ಬರುತ್ತವೆ. ಮುಖದಲ್ಲಿಯ ಉಬ್ಬು ಕಗ್ಗುಗಳಿಗೆ ಅನುಸಾರವಾಗಿ ವರ್ಣದಲೇಪನ ಮಾಡಿದ್ದಾರೆ. ಇದು ಅವರಿಗಿದ್ದ ಶರೀರ ಅಂಗರಚನೆಯ (Anatomy) ಸಾಧನೆಯನ್ನು ಎತ್ತಿ ತೋರಿಸುತ್ತದೆ.

ಹೀಗೆ ಭಾವ ನಿಖರತೆಯೇ ಇವರ ವ್ಯಕ್ತಿ ಚಿತ್ರಗಳ ವಿಶೇಷತೆಯಾಗಿದೆ. ಆದ್ದರಿಂದ ಚಿತ್ರದಲ್ಲಿರುವ ವ್ಯಕ್ತಿಯ ಸ್ವಭಾವವನ್ನು ನಾವು ಅರ್ಥೈಸಿಕೊಳ್ಳಲು ಸಾಧ್ಯವಾಗುತ್ತದೆ. ವ್ಯಕ್ತಿಗಳಲ್ಲಿರುವ ಕೋಮಲ, ಕಠೋರ, ಗಂಭೀರತೆಯನ್ನು ಸಹಿತ ಇವರ ಚಿತ್ರಗಳಲ್ಲಿ ಕಾಣಬಹುದು.

ಸಂಯೋಜನಾ ಚಿತ್ರಗಳಿಗೆ ಸಾಮಾಜಿಕ, ಐತಿಹಾಸಿಕ ಹಾಗೂ ಧಾರ್ಮಿಕ ವಿಷಯಗಳನ್ನು ಆಯ್ಕೆ ಮಾಡಿಕೊಂಡಿದ್ದಾರೆ. ಇದಕ್ಕೆ ಅವರು ಬೆಳೆದ ಪರಿಸರ, ಮನೆಯ ವಾತಾವರಣ ಹಾಗೂ ಅವರ ಮನೋಧರ್ಮದಂತೆ ಚಿತ್ರ ವಿಷಯಗಳನ್ನು ಕಂಡುಕೊಂಡಿರುವ ಅವುಗಳನ್ನು ಆ ದೃಷ್ಟಿಕೋನಕ್ಕೆ ಸರಿಯಾಗಿ ಚಿತ್ರಿಸಿರುವ ರೀತಿಗಳ ನಡುವೆ ಅವಿನಾಭಾವ ಸಂಬಂಧವಿದೆ. ಹೀಗೆ ಕಲಾವಿದನ ವ್ಯಕ್ತಿತ್ವವನ್ನು ಆತನ ಚಿತ್ರಗಳಲ್ಲಿಯೂ ಕಾಣುತ್ತೇವೆ.

ಸಂಯೋಜನಾ ಚಿತ್ರಗಳನ್ನು ಸಹಿತ ಹೆಚ್ಚಾಗಿ ಜಲವರ್ಣದಲ್ಲಿ ರಚಿಸಿದ್ದಾರೆ. ಭಾರತೀಯ ಸಂವೇದನೆಗಳಿಗೆ ಅನುಗುಣವಾಗಿ ವೈಯಕ್ತಿಕವಾದ ತಂತ್ರ, ಶೈಲಿ, ಕಲಾ ನೈಪುಣ್ಯತೆಗಳಿಂದ ನೈಜಕಲೆಯ ಮೂಲಭೂತ ಸತ್ವಗಳನ್ನು ಅಳವಡಿಸಿಕೊಂಡು ಆಕೃತಿಗಳ ನೈಜತೆಗೆ ಬಹಳ ಒತ್ತನ್ನು ನೀಡಿದ್ದಾರೆ. ಚಿತ್ರದಲ್ಲಿಯ ಪ್ರತಿಯೊಂದು ಮಾನವಾಕೃತಿಯ ಮುಖ, ದೇಹ, ಬಟ್ಟೆ ಹೀಗೆ ಎಲ್ಲ ವಸ್ತುಗಳ ನೆರಳು ಬೆಳಕನ್ನು ಅತ್ಯಂತ ಸ್ಪಷ್ಟವಾಗಿ ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ.

"ಕೊರವಂಜಿ" ಚಿತ್ರ ಇಂತಹ ಅಲೆಮಾರಿ ಜನಾಂಗದವರನ್ನು ಹಿಂದೆ ಕರ್ನಾಟಕದೂದ್ದಕೂ ಕಾಣುತ್ತೇವೆ. ಇವರು ಮನೆ ಮನೆಗೆ ಹೋಗಿ ಮುಂದಾಗುವ ಭವಿಷ್ಯವನ್ನು ತಿಳಿಸುವ ಮೂಲಕ ಅವರಿಂದ ಪಡೆದ ಕಾಳುಕಡಿ, ದುಡ್ಡಿನಿಂದ ಉಪಜೀವನ ನಡೆಸುವ ಒಂದು ಜನಾಂಗ. ಈ ಚಿತ್ರದಲ್ಲಿ ಆಕೆಯ ಬಡತನದ ದೈನ್ಯ ಮುಖಭಾವ ಸಾಲದೆಂಬಂತೆ ಕಂಕುಳಲ್ಲಿ ವೃದ್ಧಿಸಿದ ಕುಟುಂಬದ ಭಾರ, ಬಡತನದ ಸಂಕೇತವಾದ ಹರಿದ ಬಟ್ಟೆಗಳು, ತಲೆಯ ಮೇಲೆ ಕೊರವಂಜಿ ವೃತ್ತಿಯ ಸಾಂಕೇತಿಕ ಬುಟ್ಟಿ ಅದರಲ್ಲಿ ಕೋಲು, ಇನ್ನೊಂದು ಕೈಯಲ್ಲಿ ಭಿಕ್ಷೆ ನೀಡಿಸಿಕೊಳ್ಳುವ ಪಾತ್ರೆ, ಸಂಪೂರ್ಣವಾಗಿ ಬಡತನದ ಸಾಕಾರ ಮೂರ್ತಿವೆತ್ತಂಥದ ಚಿತ್ರಣ ಇಲ್ಲಿದೆ. ಅವರದೇ ಆದ ಶೈಲಿಯ ಆಕೃತಿ ಅದಕ್ಕೆ ತಕ್ಕಂತೆ ವರ್ಣಗಳ ತೆಳುವಾದ ಲೇಪನ ಚಿತ್ರಕ್ಕೆ ಮೆರಗುಕೊಟ್ಟಿದೆ. ಈ ಚಿತ್ರ ನಮ್ಮ ನಾಡಿನಲ್ಲಿ ನಶಿಸಿಹೋಗುತ್ತಿರುವ ಒಂದು ಜನಾಂಗದ ಪರಿಚಯವನ್ನು ಮಾಡಿಕೊಡುತ್ತದೆ. ಈಗ ಇಂತಹ ಜನ ಅತ್ಯಂತ ವಿರಳ. ಪಾರದರ್ಶಕ ವರ್ಣಗಳ ನವುರಾದ ನೆರಳು-ಬೆಳಕು ಈ ಚಿತ್ರಕ್ಕೆ ಮೆರಗು ತಂದಿದೆ. ಹಿನ್ನಲೆಯಲ್ಲಿಯ ಮಣ್ಣಿನಿಂದ ಕಟ್ಟಿದ ಮನೆಯ ಗೋಡೆಯ ಭಾಗ ಸಂಯೋಜನೆಗೆ ಪೂರಕವಾಗಿದೆ.

ತೈಲ ವರ್ಣದಲ್ಲಿ ರಚಿಸಿದ ಇನ್ನೊಂದು ಸಂಯೋಜನಾ ಚಿತ್ರ "ವಿಶ್ರಾಂತಿ" ಈ ಚಿತ್ರಕ್ಕೆ ಚಿನ್ನದ ಪದಕ ಬಹುಮಾನ ದೊರೆತಿದೆ. ಈ ಚಿತ್ರದಲ್ಲಿ "ಸಂತೆ"ಗೆಂದು ಬಂದ ಜನ ಕಡುಬಿಸಿಲಿನಲ್ಲಿ ಆಯಾಸಗೊಂಡು ವಿಶ್ರಾಂತಿ ಪಡೆಯುತ್ತಿರುವ ದೃಶ್ಯ. ನೈಜಕತೆಯೇ ಇಲ್ಲಿಯ ಪ್ರಮುಖ ಅಂಶ. ಮರದ ಕೆಳಗೆ ವಿಶ್ರಾಂತಿ ಪಡೆಯುತ್ತಿರುವ ಜನರು, ಎತ್ತು ಹಾಗೂ ನಾಯಿ ಇವರುಗಳ ಮೇಲೆ ಆ ಮರದ ನೆರಳು ಹೇಗೆ ಬಿದ್ದಿದೆ ಎಂಬುದನ್ನು ಅತ್ಯಂತ ಸೂಕ್ಷ್ಮವಾಗಿ ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಸುತ್ತಲೂ ಬಿಸಿಲಿನ ತಾಪ ಪ್ರಖರತೆಯನ್ನು ಬಿಂಬಿಸಿದ್ದಾರೆ. ವಿಶ್ರಾಂತಿ ಪಡೆಯುತ್ತಿರುವವರ ಹಾವ ಭಾವಗಳನ್ನು ನೈಜತೆಯ ಪಾರಾಕಾಷ್ಠತೆಯನ್ನು ಮುಟ್ಟಿವೆ. ಚಿತ್ರದಲ್ಲಿ ಕೆಲವೇ ಸೌಮ್ಯ ಹಾಗೂ ಉಗ್ರ ವರ್ಣಗಳನ್ನು ಬಳಸಿದ್ದಾರೆ. ಅವೆರೆಡು ಒಂದನ್ನೊಂದು ಹೊಂದಿಕೊಂಡು ಒಟ್ಟಾರೆ ಚಿತ್ರದ ಪರಿಣಾಮಕ್ಕೆ ಚಾಲನೆ ಕೊಟ್ಟಿವೆ. ಮನುಷ್ಯರ ಹಾಗೂ ಪ್ರಾಣಿಗಳ ಮುಖದಲ್ಲಿ ನೆರಳು ಬೆಳಕನ್ನು ವಿಂಗಡಿಸುವುದರೊಂದಿಗೆ ಅವುಗಳ ಮುಖದಲ್ಲಿಯ ಉಬ್ಬು-ತಗ್ಗುಗಳೊಂದಿಗೆ ಆಕೃತಿಗಳನ್ನು ನೈಜತಿಯಿಂದ ಚಿತ್ರಿಸಿದ್ದಾರೆ.

ಇವರ ತೈಲ ವರ್ಣದ ಸಂಯೋಜನಾ ಚಿತ್ರಗಳನ್ನು ಗಮನಿಸಿದಾಗ ಅವರ ಜಲವರ್ಣದ ಆಳವಾದ ಅಧ್ಯಯನದ ಪ್ರಭಾವ ಈ ಚಿತ್ರಗಳಲ್ಲಿ ಅಲ್ಲಲ್ಲಿ ಪರಿಣಾಮ ಬೀರಿದೆ. ಹೆಚ್ಚಾಗಿ ಇವರ ಇಲ್ಲಿಯ ಆಕೃತಿಗಳು ಅಕಾಡೆಮಿಕ್ ಶೈಲಿಯಂತೆ ಕಂಡರೂ ಅವರದೇ ಆದ ಶೈಲಿಯನ್ನು ಹೊಂದಿವೆ. ಅಲ್ಲದೇ ಉತ್ತರ ಕರ್ನಾಟಕದ ಗಡಿಭಾಗದ ಜನಜೀವನ ಅವರ ವೇಶಭೂಷಣ ವಿಶೇಷವಾಗಿ ಗಂಡಸರ ತಲೆಯ ಮೇಲಿನ ರುಮಾಲು (ಪೇಟ) ಹಾಗೂ ಹೆಂಗಸರು ಕಚ್ಚೆ ಹಾಕಿಕೊಂಡು ಸೀರೆ ಉಟ್ಟುಕೊಳ್ಳುವ ರೀತಿ ಮಹಾರಾಷ್ಟ್ರದ ಪ್ರಭಾವವನ್ನು ಸೂಚಿಸುತ್ತದೆ. ಅಲ್ಲಿಯ ಸಂಪ್ರದಾಯಗಳ ತಿಳುವಳಿಕೆಯನ್ನು ನೀಡುವ ಚಿತ್ರಗಳಾಗಿವೆ. ಹೀಗೆ ಕೆರೆಯ ತೀರದ ಜನ, ಸಂತೆ, ಹರಟೆ ಮುಂತಾದ ಅನೇಕ ವೈವಿಧ್ಯಮಯವಾದ ಸಂಯೋಜನಾ ಚಿತ್ರಗಳನ್ನು ಅವರ ವೈಯಕ್ತಿಕ ಮನೋಧರ್ಮದ ಮೇಲೆ ನೈಜ ಕಲಾಶೈಲಿಯಲ್ಲಿ ರಚಿಸಿದ್ದಾರೆ. ತಮ್ಮದೇ ಆದ ಅನುಭವದೊಂದಿಗೆ ಆಹ್ಲಾದಕರ ರೀತಿಯಲ್ಲಿ ಮನಸ್ಸಿಗೆ ಆನಂದ ನೀಡುವ ಜನಮನ ಸೂರೆಗೊಳ್ಳುವ ರೀತಿಯಲ್ಲಿ ಚಿತ್ರಿಸಿದ್ದಾರೆ. ಇವರು ರಚಿಸಿದ ಚಿತ್ರಗಳಿಗೆ ಲೆಕ್ಕವೇ ಇಲ್ಲ ಅವುಗಳನ್ನು ದಾಖಲಿಸುವ ಗೋಜಿಗೂ ಅವರು ಹೋಗಿಲ್ಲ.

ಅವರು ರಚಿಸಿದ ಚಿತ್ರಗಳಲ್ಲಿ ಕೆಲವನ್ನು ಜರ್ಮನಿ ಹಾಗೂ ಅಮೇರಿಕೆಯಲ್ಲಿಯೂ ಸಂಗ್ರಹಿಸಲ್ಪಟ್ಟಿವೆ.

**ರೇಖಾ ಚಿತ್ರಗಳು**

ನಾಗೌಡ ಅವರು ಪೆನ್ಸಿಲ್ ಇಂಕ್ ಹಾಗೂ ಚಾರ್‌ಕೋಲ್ ಮಾಧ್ಯಮದಲ್ಲಿ ವೈವಿಧ್ಯಮಯವಾದ ವಿಷಯಗಳ ರೇಖಾಚಿತ್ರಗಳನ್ನು ರಚಿಸಿದ್ದಾರೆ. ಆಗೆಲ್ಲ ಇವುಗಳನ್ನು ಕಂಡು ಚಿತ್ರಗಳೆಂದು ಮಾತ್ರ ಪರಿಗಣಿಸುತ್ತಿದ್ದರು. ಈಗಿನಂತೆ ಪ್ರತ್ಯೇಕವಾದ ಕಲಾಕೃತಿ ಎಂದು ಭಾವಿಸುತ್ತಿರಲಿಲ್ಲ. ದೈನಂದಿನ ಅಂಕನೆಗಳ ಜೊತೆಗೆ ಭಾವಚಿತ್ರ, ಸಂಯೋಜನೆ, ನಿಸರ್ಗ ಚಿತ್ರಗಳನ್ನು ರಚಿಸಿದ್ದಾರೆ. ಹೆಚ್ಚಾಗಿ ಅವರು ಸಿನಿಮಾ ಕಂಪನಿಯಲ್ಲಿ ಕಲಾ ಉಪನಿರ್ದೇಶಕರಾಗಿ ವೃತ್ತಿ ಕೈಗೊಂಡಾಗ ಚಲನಚಿತ್ರದ ದೃಶ್ಯದ ಹಿನ್ನೆಲೆಗೆ ಬೇಕಾದ ಪ್ರತಿಯೊಂದು ವಸ್ತು ಹಾಗೂ ಸನ್ನಿವೇಶ, ನೃತ್ಯಕ್ಕೆ ಬೇಕಾದ ವೇಶಭೂಷಣಗಳ ಅಂಕನೆಗಳನ್ನು ಲೆಕ್ಕವಿಲ್ಲದಷ್ಟು ಚಿತ್ರಿಸಿದ್ದಾರೆ. ಯಾಕೆಂದರೆ ಇವರ ಅಂಕನೆ ರೂಪಗೊಂಡ ನಂತರವೇ ನಿಜವಾದ ದೃಶ್ಯದ ಪರಿಕಲ್ಪನೆಗೆ ಚಾಲನೆ ದೊರೆಯುತ್ತಿತ್ತು.

ಇವರ ಈ ರೇಖಾ ಚಿತ್ರಗಳು ಸನ್ನಿವೇಶದ ನಿಜ ಅನುಭವದ ಆನಂದ ನೀಡುತ್ತವೆ. ರೇಖೆಗಳ ಚಲನೆ ಅಲ್ಲಿ ವ್ಯಕ್ತವಾಗಿರುವ ಸೌಂದರ್ಯ ಪ್ರಜ್ಞೆ ಆ ಚಲನಚಿತ್ರ ಮಾಧ್ಯಮಕ್ಕೆ ಜೀವಂತಿಕೆಯನ್ನು ತಂದುಕೊಟ್ಟಿದೆ. ದೈನಂದಿನ ಅಂಕನೆಗಳಲ್ಲೂ ಸಹಿತ ಸರಳ ರೇಖೆಗಳಿಂದ ಆಕೃತಿಗಳನ್ನು ಅತ್ಯಂತ ಪ್ರಮಾಣ ಬದ್ದವಾಗಿ ರಚಿಸಿದ್ದು ಆಕೃತಿಗಳು ಸ್ಪಷ್ಟವಾಗಿ ಸ್ಪುಟವಾಗಿ ಇವೆ. ಹೀಗೆ ಇವರು ರೇಖೆಗಳಲ್ಲಿ ಪ್ರಭುತ್ವವನ್ನು ಸಾಧಿಸಿದ್ದಾರೆ.

